ಶ್ರೀ ಶೇಷಾಚಲ ಸದ್ಬೋಧ ಚಂದ್ರಿಕೆ, ಆನಂದವನ.

ಧಾತು ನಾಮ ಸಂವತ್ಸರದ ಕಾಣಿಕೆಯ ಪುಸ್ತಕ

ವೀರಕುಮಾರಿ

# ಕನಕಲತೆ.

[ ಐತಿಹಾಸಿಕ ಕಥೆ. ]

ಲೇಖಕ:

ನಾಗೇಶ.

ಪ್ರಕಾಶಕ:

ಯ. ಗು. ಕುಲಕರ್ಣಿ,

ಸಂಪಾದಕ, ಸ. ಚ.

ಆನಂದವನ.

ಇದನ್ನು ಭಿ. ಪ. ಕಾಳೆ, ಇವರು ಆನಂದವನ-ಅಗಡಿಯೊಳಗಿನ ತಮ್ಮ
ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಛಾಪಿಸಿದರು.

1936

ಬೆಲೆ 3 ಆಣೆ




ಭರತ ವರ್ಷದಲ್ಲಿ ಮಹಮ್ಮದೀಯರ ಆಳಿಕೆಯಿದ್ದಾಗ ತತ್ಕಾಲೀನ ಮಹಮ್ಮದೀಯ ರಾಜರಲ್ಲಿ ಅನೇಕರು ಹಿಂದುಧರ್ಮದ ಮೇಲೆ ಧಾರ್ಮಿಕ ಅತ್ಯಾಚಾರ ನಡೆಯಿಸಿದರೆಂಬದು ಇತಿಹಾಸ ಪ್ರಸಿದ್ಧವಾದ ಸಂಗತಿಯಾಗಿದೆ. ಆಗ ಧರ್ಮದ ಏಕನಿಷ್ಠ ಹಿಂದುಗಳು ಸ್ವಧರ್ಮ ರಕ್ಷಣೆಗಾಗಿ ಸರ್ವನಾಶ ಮಾಡಿಕೊಂಡ ದೃಷ್ಟಾಂತಗಳು ಹೇರಳವಾಗಿ ದೊರೆಯುವವು. ಕೆಲವು ಜನ ವೀರ ಕುಮಾರರೂ ವೀರ ಕುಮಾರಿಯರೂ ಬಂದ ಗಂಡಾಂತರಗಳಿಗೆ ಎದೆಗೊಟ್ಟು, ಅತ್ಯಾಚಾರಿಗಳಿಗೆ ಭೀಷಣ ಪ್ರಾಯಶ್ಚಿತ್ತ ವಿಧಿಸಿ, ಆತ್ಮತ್ಯಾಗ ಮಾಡಿದ ಉದಾಹರಣಗಳೂ ಅಲ್ಲಲ್ಲಿ ದೊರೆಯುವವು. ರಾಜ್ಯಲಾಭಯೋಗವಿದ್ದರೂ, ಸಾಮ್ರಾಜ್ಞಿಪದವು ಪ್ರಾಪ್ತವಾಗುತ್ತಿದ್ದರೂ, ಆಗಿನ ಸ್ತ್ರೀಪುರುಷರು ಅವುಗಳನ್ನು ತುಚ್ಛೀಕರಿಸಿ, ಪ್ರಾಣವನ್ನು ತೃಣಸಮಾನವಾಗಿ ತಿಳಿದು, ಆತ್ಮಯಜ್ಞ ಮಾಡಿದ್ದನ್ನು ನೋಡಿದರೆ, ಅವರು ಸ್ವಧರ್ಮದಲ್ಲಿ ಎಷ್ಟು ದೃಢ ವಿಶ್ವಾಸವುಳ್ಳವರಿದ್ದರೆಂಬುದು ಸ್ಪಷ್ಟವಾಗುತ್ತದೆ. ಈ ಚಿಕ್ಕ ಕಥೆಯ ನಾಯಕಿಯಾದ ವೀರಕುಮಾರಿ **ಕನಕಲತೆ**ಯು ಪಟ್ಟಮಹಿಷಿ ಪದವನ್ನು ತಿರಸ್ಕರಿಸಿ, ಎಂಥ ಪ್ರಸಂಗವೊದಗಿದರೂ ಎದೆಗುಂದದೆ, ಅತ್ಯಾಚಾರಿಗೆ ತಕ್ಕ ಪ್ರಾಯಶ್ಚಿತ್ತವನ್ನು ವಿಧಿಸಿದ ಹೃದಯಸ್ಪರ್ಶಿಯಾದ ಸಂಗತಿಯು ಇದರಲ್ಲಿರುವದು. ಆಗಿನ ಕಾಲದ ಹಿಂದುಗಳು ಧರ್ಮಕ್ಕಾಗಿ ಆತ್ಮನಾಶ - ಸರ್ವನಾಶ ಮಾಡಿಕೊಂಡ ದೃಶ್ಯಗಳು ಸದ್ಯದ ಧರ್ಮಶಿಥಿಲತೆಯ ಕಾಲದಲ್ಲಿ ಅನುಕರಣೀಯವೂ ಪರಿಣಾಮಕಾರಕವೂ ಆಗದೆ ಇರಲಾರವು.

ಸದ್ಬೋಧ ಚಂದ್ರಿಕೆಯ ಧಾತು ಸಂವತ್ಸರದ ಕಾಣಿಕೆಗೆಂದು ಈ ಕಥೆಯನ್ನು ಪ್ರಕಟಿಸಲೊಪ್ಪಿದ್ದಕ್ಕಾಗಿ, ಸಂಪಾದಕ ಮಹಾಶಯರಿಗೆ ಕೃತಜ್ಞನಾಗಿರುವೆನು.

ಅಡರಕಟ್ಟಿ,
16-1-36.

ಕನ್ನಡಿಗರ ವಿಧೇಯ,
**ನಾಗೇಶ.**

ವೀರಕುಮಾರಿ.

# ಕನಕಲತೆ.

## ಹಾಡಿನೊಳಗಿನ ಹುಡುಗಿ.

ಪೌರ್ಣಿಮೆಯ ರಾತ್ರಿಯು. ಸುಮಾರು ಎರಡು ಪ್ರಹರ ರಾತ್ರಿಯಾಗಿರಬಹುದು. ಸುಧಾಕರನು ಆಕಾಶದ ಮಧ್ಯ ಭಾಗದಲ್ಲಿ ಬಂದಿದ್ದನು. ಅವನು ತನ್ನ ಸೌಮ್ಯ ಹಾಗು ಶೀತಲ ಕಿರಣಗಳನ್ನು ಭೂಭಾಗದ ಮೇಲೆ ಕೆಡಹಿದ್ದನು. ಪೂರ್ಣ ಚಂದ್ರನ ಶುಭ್ರ ಪ್ರಕಾಶದಿಂದ ಸೃಷ್ಟಿದೇವತೆಯು ಶ್ವೇತವಸನಧಾರಿಣಿಯಾದಂತೆ ಶೋಭಿಸತೊಡಗಿದ್ದಳು. ಸರ್ವ ಸಜೀವಸೃಷ್ಟಿಯು ಗಾಢ ನಿದ್ರೆಯಲ್ಲಿ ಮಗ್ನವಾದ್ದರಿಂದ ಎಲ್ಲೆಡೆಯಲ್ಲಿಯೂ ಶಾಂತತಾ ಸಾಮ್ರಾಜ್ಯವು ವ್ಯಾಪಿಸಿತ್ತು. ಮಂದ-ಮಂದವಾಗಿ ಸಂಚರಿಸತೊಡಗಿರುವ ಮಾರುತನಿಂದ "ಖುಶನುಮಾ ಝೀಲ" ಮಂದಿರದ ಬಳಿಯಲ್ಲಿದ್ದ ರೌಪ್ಯಸಾಗರದಲ್ಲಿ ಸಣ್ಣಸಣ್ಣ ತರಂಗಗಳು ಅಗಣಿತವಾಗಿ ಹೊರಟು, ಅದು ಸಾವಿರಾರು ಚಂದ್ರರನ್ನು ಆಧೀನದಲ್ಲಿಟ್ಟುಕೊಂಡಂತೆ ಕಂಗೊಳಿಸುತ್ತಲಿತ್ತು. ಇಂತಹ ಪ್ರಶಾಂತ ವೇಳೆಯಲ್ಲಿ ಒಂದು ನೌಕೆಯು ರೌಪ್ಯಸಾಗರದಲ್ಲಿ ಮೆಲ್ಲಮೆಲ್ಲನೆ ಜಲವಿಹಾರ ಮಾಡತೊಡಗಿತ್ತು.

ನೌಕೆಯು ಬಹಳೇ ಶೃಂಗರಿಸಲ್ಪಟ್ಟಿತ್ತು. ಅದರಲ್ಲಿ ಹತ್ತು-ಹದಿನೈದು ಜನರು ಕುಳಿತುಕೊಳ್ಳುವಷ್ಟು ಪ್ರಶಸ್ತವಾದ ಸ್ಥಳವಿತ್ತು. ಒಳಗೆ ಕಿನಕಾಫಿನ ಗಾದಿಗಳೂ ರತ್ನಗಂಬಳಿಗಳೂ ಹಾಸಲ್ಪಟ್ಟಿದ್ದವು. ನೌಕೆಯಲ್ಲಿ ಕುಳಿತ ಜನರು ಅಮೌಲ್ಯ ವಸ್ತ್ರಾಭರಣ ಭೂಷಿತರಾಗಿದ್ದರು. ಮಧ್ಯಭಾಗದಲ್ಲಿ ಜರದ ಗಾದಿಯ ಮೇಲೆ ಜರದ ಲೋಡಿಗೆ ಆತುಕೊಂಡು ಬಾದಶಹಾ ಅಹಮ್ಮದಶಹನು ಕುಳಿತಿದ್ದನು. ಬಳಿಯಲ್ಲಿಯೇ ಒಬ್ಬ ಸೇವಕನು ಸುವರ್ಣದ ಗುಡಗುಡಿಯಲ್ಲಿ ಸುಗಂಧೀ ತಂಬಾಕ ತುಂಬುತ್ತಲಿದ್ದನು. ಹತ್ತರದಲ್ಲಿ ಶಿರಾಜಿಯಿಂದ ತುಂಬಿದ ಸೀಸೆಗಳೂ ಸುವರ್ಣದ ಪೇಲೆಗಳೂ ಇದ್ದವು. ಬಾದಶಹನು ಮಿತಿಮೀರಿ ಶಿರಾಜಿಯನ್ನು ಕುಡಿದದ್ದರಿಂದ ಅರ್ಧಮರ್ಧ ಎಚ್ಚರತಪ್ಪಿದ್ದನು. ಸೇವಕನು ಚಿಲಿಮೆಯನ್ನು ತುಂಬಿದ ಮೇಲೆ ಅದನ್ನು ಹೊತ್ತಿಸಿ ಬಾದಶಹನ ಕೈಯಲ್ಲಿ ಕೊಟ್ಟನು. ಜಾಗ್ರತೆ-ಅಜಾಗ್ರತೆಗಳ ಮಿಶ್ರಣದ ಅವಸ್ಥೆಯಲ್ಲಿಯೇ ಅವನು ಗುಡುಗುಡಿಯನ್ನು ಒಂದೆರಡು ಸಾರೆ ಸೇದಿ ಎಳೆದು ಮತ್ತೆ ಲೋಡಿಗೆ ಒರಗಿದನು. ಬಳಿಯಲ್ಲಿ ನಾಮಾಂಕಿತ ಗಾಯಕರು ಸರತಿಯಂತೆ ಹಾಡ ತೊಡಗಿದ್ದರು. ಬಾದಶಹನು ಆ ಗಾಯನವನ್ನು ಲಕ್ಷ್ಯಗೊಟ್ಟು ಕೇಳುತ್ತಿದ್ದನೋ ಇಲ್ಲವೋ ಎಂಬದನ್ನು ಹೇಳಲಿಕ್ಕೆ ಬರುವಂತಿದ್ದಿಲ್ಲ. ಅವನು ನಡುನಡುವೆ "ಶಾಬಾಸ್, ಶಾಬಾಸ್" ಎಂದು ಉದ್ಗಾರ ತೆಗೆಯ ತೊಡಗಿದ್ದನು. ನೌಕೆಯು ಮಂದ-ಮಂದವಾಗಿ

ರೌಪ್ಯಸಾಗರದ ತುಂಬ ಅಲೆದಾಡತೊಡಗಿತ್ತು. ಮಂದಾನಿಲನು ಪುಷ್ಪಗಂಧವನ್ನು ಬೀರುತಲಿದ್ದನು. ಚಂದ್ರನು ಅಮೃತಕಿರಣಗಳನ್ನು ಎಲ್ಲೆಡೆಯಲ್ಲಿ ಪಸರಿಸಿದ್ದನು. ಸಹಸ್ರಾರು ಚಂದ್ರರು ಮೀಯತೊಡಗಿದ್ದ ರೌಪ್ಯವರ್ಣದ ರೌಪ್ಯಸಾಗರವೂ, ಚಂದ್ರಿಕೆಯ ಧವಳಪ್ರಕಾಶದಿಂದ ಶ್ವೇತ ವಸ್ತ್ರವನ್ನು ಧರಿಸಿದಂತೆ ಕಾಣುತ್ತಿದ್ದ ಸೃಷ್ಟಿಸುಂದರಿಯೂ, ಮೌಕ್ತಿಕದಂತೆ ಕಂಗೊಳಿಸುತ್ತಿದ್ದ "ಖುಶನುಮಾ ಝೀಲ" ರಾಜಮಂದಿರವೂ ಮನಸ್ಸನ್ನು ಆಹ್ಲಾದಗೊಳಿಸುತಲಿದ್ದವು.

ಕೆಲವು ವೇಳೆಯ ಮೇಲೆ ಅಹಮ್ಮದಶಹನು ಮದ್ಯದ ಗುಂಗಿನಿಂದ ಎಚ್ಚತ್ತನು. ಗಾಯನವು ಯಥಾಪ್ರಕಾರವಾಗಿ ನಡೆದಿತ್ತು. ಹೊಸದಾಗಿ ಆಸ್ಥಾನಕ್ಕೆ ಆಗಮಿಸಿದ ಶಾಹೀರನೊಬ್ಬನು ಒಳ್ಳೆಯ ಸ್ಫೂರ್ತಿಯಿಂದ ಹಾಡುತ್ತಿದ್ದನು. ಅವನು ಅನ್ನುತ್ತಿದ್ದ ಹಾಡು ಒಳ್ಳೆಯ ಮನೋಹರವಿತ್ತು. ಅವನು ಅರ್ಧ ಹಾಡು ಅಂದ ಮೇಲೆ ಬಾದಶಹನಿಗೆ ಪೂರಾ ಎಚ್ಚರಾದ್ದರಿಂದ, ಅದೇ ಹಾಡನ್ನು ಮೊದಲಿನಿಂದಅನ್ನುವುದಕ್ಕಾಗಿ ಅವನು ಗಾಯಕನಿಗೆ ಆಜ್ಞೆಮಾಡಿದನು. ಗಾಯನವು ಮುಗಿದ ಮೇಲೆ ಬಾದಶಹನು ಚಕಿತವಾಣಿಯಿಂದ—"ಅಹಾ! ಇಂತಹ ರಮಣೀರತ್ನವು ಧರಿತ್ರಿಯಲ್ಲಿ ಎಲ್ಲಿಯಾದರೂ ದೊರೆಯುವುದುಂಟೇ? ತಾನಸೇನ, ನಿನ್ನ ಹಾಡಿನೊಗಿನ ರಮಣಿಯು ಇಹಲೋಕದವಳಲ್ಲ; ಅವಳು ಸ್ವರ್ಗೀಯ ಸುಂದರಿಯು."

"ಜಹಾಂಪನಾಹ, ಸ್ವರ್ಗದೊಳಗಿನ ತರುಣಿಯರನ್ನುಕಂಡವರಾರು? ನಾನು ಭೂಲೋಕದೊಳಗಿನ ಅದರಲ್ಲಿ ಭರತಖಂಡದೊಳಗಿನ ಹಿಂದುರಮಣಿಯ ವರ್ಣನೆಯ ಪದ್ಯವನ್ನು ಅಂದೆನು."

"ಹಿಂದಿನ ಯುಗದಲ್ಲಿ ಇಂತಹ ರಮಣೀರತ್ನವಿದ್ದರೆ ಇರಬಹುದು."

"ಇದೇ ಯುಗದೊಳಗಿನ, ಸದ್ಯದಲ್ಲಿ ಜೀವಂತವಾಗಿರುವ ನವತರುಣಿಯ ರೂಪವರ್ಣನೆಯ ಪದವನ್ನೇ ನಾನು ಅಂದಿರುವೆನು, ಖಾವಿಂದ!"

"ತಾನಸೇನಜಿ, ಈ ನಿನ್ನ ಹಾಡಿನೊಳಗಿನ ಹುಡುಗಿಯು ಸದ್ಯದಲ್ಲಿರುವಳೇ? ಅವಳು ಎಲ್ಲಿರುವಳೆಂಬುದು ನಿನಗೆ ಗೊತ್ತುಂಟೇ?"

"ಹುಜೂರ, ಅವಳು ಹೋಡೀರಾಜ್ಯದ ಅಧಿಪತಿಯ ಪುತ್ರಿಯು. ರಾಜಧಾನಿ ಆಹೋರದಲ್ಲಿ ಅವಳು ಇರುತ್ತಾಳೆ. ಇನ್ನೂ ಅವಳು ಅವಿವಾಹಿತಳಿರುವಳು."

"ತಾನಸೇನ, ಅವಳ ವಯಸ್ಸು ಎಷ್ಟೆಂಬುದು ನಿನಗೆ ತಿಳಿದಿರುವದೇನು?"

"ಹದಿನಾರು-ಹದಿನೆಂಟು ವರ್ಷದವಳಿರಬಹುದು."

"ನಿನ್ನ ಹಾಡಿನೊಳಗಿನ ವರ್ಣನೆಯಂತೆಯೇ ಅವಳ ರೂಪಲಾವಣ್ಯಾದಿಗಳು ಇರುವವೋ?"

"ಗರೀಬ ಪರವರದಿಗಾರ, ಅವಳ ವರ್ಣನೆಯನ್ನು ಯಥಾಸ್ಥಿತವಾಗಿ ಮಾಡಲಿಕ್ಕೆ ಕವಿತ್ವದಲ್ಲಿ ಅಷ್ಟೊಂದು ಶಕ್ತಿಯಿಲ್ಲ. ಪ್ರತ್ಯಕ್ಷ ನೋಡಿದರೆ, ಕವಿತ್ವವರ್ಣನೆಯು ನಿಜಸ್ಥಿತಿಯ ಪಾಸಂಗಕ್ಕೂ ಹತ್ತಲಾರದು."

ಅಹಮ್ಮದಶಹನು ಬೆರಗಾದನು. 'ಇದ್ದರೆ ಇಂತಹ ಲಾವಣ್ಯಮಯಿೞ ಗೃಹಿಣಿ ಯಿರಬೇಕು,' ಎಂದು ಅವನು ಮನದಲ್ಲಿಯೇ ಅಂದುಕೊಂಡು—"ತಾನಸೇನ, ನೀನು ಆ ಕನ್ನಿಕೆಯನ್ನು ನೋಡಿರುವಿಯೇನು ?"

ತಾನಸೇನಜಿಯು ಕೈ ಜೋಡಿಸಿ,—"ಬಂದಹನೇ ವಾಜ !"

"ಅವಳನ್ನು ನೀನು ಹೇಗೆ ನೋಡಿದೆ?"

"ನಾನು ಒಮ್ಮೆ ಆಹೋರದ ರಾಜೋದ್ಯಾನದ ಬಳಿಯಲ್ಲಿದ್ದೆನು. ರಾಜ ಕುಮಾರಿಯು ತನ್ನ ಸಖಿಯರೊಡನೆ ಪುಷ್ಪಗಳನ್ನು ಕೊಯ್ಯುತ್ತಿದ್ದಳು. ಆಗ ನಾನು ಅವಳನ್ನು ಕಣ್ಣುತುಂಬ ನೋಡಿದೆನು."

"ತಾನಸೇನ, ಆ ರಮಣೀಮಣಿಯ ನಾಮಾಭಿಧಾನದೊಳಗಿನ ಶುಭಾಕ್ಷರ ಗಳಾವುವು ?"

"ಕ ನ ಕ ಲ ತೆ !"

"ರೂಪವೂ ಸುಂದರವೇ, ಹೆಸರೂ ಸುಂದರವೇ! ಒಳ್ಳೇದು. ಹೋಡೀ ರಾಜ್ಯಕ್ಕೆ ಪರ್ವತಸಿಂಹನು ಅರಸನಿರುವನಲ್ಲವೇ ?"

"ಹೌದು. ಹುಜೂರ, ಆ ಪರ್ವತಸಿಂಹನ ಮಗಳೇ ಕನಕಲತೆಯು."

"ತಾನಸೇನ, ನಾನು ಯತ್ನಪೂರ್ವಕವಾಗಿ ಆ ಕನಕಲತೆಯನ್ನು ವಶಪಡಿಸಿ ಕೊಳ್ಳುವೆನು. ನಿನ್ನ ವರ್ಣನೆಯಂತೆ ಅವಳು ಲಾವಣ್ಯಮಯಿಯಿರದಿದ್ದರೆ, ನಿರ ರ್ಥಕ ಶ್ರಮಪಡಿಸಿದ ತಪ್ಪಿಗಾಗಿ ನಿನ್ನ ನಾಲಿಗೆಯು ಸೀಳಲ್ಪಡುವದು."

"ಖಾವಿಂದ, ನನ್ನ ವರ್ಣನೆಗಿಂತ ಮಿಗಿಲಾಗಿ ಅವಳ ರೂಪವಿದ್ದರೆ?"

"ನಿನಗೆ ದೊಡ್ಡ ಜಹಗೀರಿಯು ಪಾರಿತೋಷಕವೆಂದು ಕೊಡಲ್ಪಡುವದು.'

"ಅವಳ ತೇಜವು ನಿಮ್ಮ ಕಣ್ಣು ಕುಕ್ಕಿಸದಿದ್ದರೆ, ನನ್ನನ್ನು ಶತಛಿದ್ರ ಮಾಡ ಬಹುದು."

ಅಹಮ್ಮದಶಹನು ತಾನಸೇನನಿಂದ ಮತ್ತೊಮ್ಮೆ ಕನಕಲತೆಯ ವರ್ಣನಪರ ವಾದ ಗಾಯನ ಮಾಡಿಸಿದನು. ಅಷ್ಟರಲ್ಲಿ ಚಂದ್ರನು ಪಶ್ಚಿಮ ಕ್ಷಿತಿಜವನ್ನು ಸಮೀಪಿ ಸಿದ್ದನು. ಪ್ರಾಗಂಗನೆಯ ಮುಖವು ಪ್ರಿಯ ಭಾಸ್ಕರನ ಆಗಮನವಾಗುವದೆಂದು ಆರಕ್ತಭಾವ ಹೊಂದಿತ್ತು. ಪ್ರಾತಃಕಾಲದ ತಂಗಾಳಿಯು ಸುಳಿಯತೊಡಗಿದ್ದರಿಂದ ಬೆಳಗು ಬಂದಿತೆಂದು ಬಾದಶಹನ ಕಲ್ಪನೆಯಾಯಿತು. ಕೂಡಲೆ ನೌಕೆಯನ್ನು ದಂಡೆಗೆ ಒಯ್ಯುವದಕ್ಕಾಗಿ ನಾವಿಕರಿಗೆ ಆಜ್ಞಾಪಿಸಿದನು.

ದಿವ್ಯರೂಪವರ್ಣನೆಯಿಂದ ಭ್ರಮಿಷ್ಟನಂತಾದ ಖಾನನು ತನ್ನ "ಖುಷನುಮಾ ಖೀಲ" ಮಂದಿರದಲ್ಲಿದ್ದ ಮಂತ್ರಣಾಗಾರದಲ್ಲಿ ಒಬ್ಬನೇ ಕುಳಿತುಕೊಂಡಿದ್ದನು. ಅವನ ತಲೆಯಲ್ಲಿ ನಾನಾವಿಧದ ವಿಚಾರಗಳು ಬರತೊಡಗಿದ್ದವು. ಹೋಡೀ ರಾಜಕುಮಾರಿ ಯನ್ನು ಯಾವಾಗ ಸ್ವಾಧೀನಪಡಿಸಿಕೊಳ್ಳುವೆನೋ, ಯಾವಾಗ ಅವಳನ್ನು ತನ್ನವ ಳನ್ನಾಗಿ ಮಾಡಿಕೊಳ್ಳುವೆನೋ, ಎಂದು ಅವನು ಎಣಿಕೆ ಹಾಕತೊಡಗಿದ್ದನು. ಅಷ್ಟ

ರಲ್ಲಿ ಸೂರ್ಯನು ಉದಯಿಸಿದನು. ಅವನ ಪ್ರಕಾಶಮಯಿ ಕಿರಣಗಳಿಂದ ವಿಶ್ವವು ಪ್ರಕಾಶಮಾನವಾಯಿತು. ಕೂಡಲೆ ಅವನು ತನ್ನ ಸರದಾರನಾದ ರೋಷನಖಾನ ನನ್ನು ಕರೆತರುವದಕ್ಕೆ ದೂತನನ್ನು ಕಳುಹಿಸಿದನು. ಮುಂದೆ ಸ್ವಲ್ಪ ವೇಳೆಯಲ್ಲಿಯೇ ಖಾನನು ಅಲ್ಲಿಗೆ ಬಂದು, ಬಾದಶಹನಿಗೆ ಮುಜುರೆ ಮಾಡಿ ನಿಂತನು.

"ರೋಷನಖಾನ, ಒಂದು ಅಗತ್ಯದ ಹಾಗು ಮಹತ್ವದ ಕೆಲಸವನ್ನು ಕೊನೆಗಾಣಿಸಬೇಕಾಗಿರುವದು. ಅದು ನಿನ್ನಂತಹ ಚತುರನಿಂದಲೇ ಕೊನೆಗಾಣುವಂತಹದಾಗಿರುವದು."

"ಶಹಾನಶಾಹ, ಯಾವ ಕೆಲಸವು? ಹೇಳಿದರೆ, ಆ ಕಾರ್ಯವನ್ನು ಈಡೇರಿಸಲಿಕ್ಕೆ ಶಕ್ತಿಮೀರಿ ಸಾಹಸ ಮಾಡುವೆನು."

"ರೋಷನ, ಹೋಡೀ ರಾಜ್ಯಾಧಿಪತಿ ಪರ್ವತಸಿಂಹನ ಲಾವಣ್ಯಮಯಿಯಾದ ಕುಮಾರಿಯನ್ನು ವರಿಸಬೇಕೆಂದು ನಾನು ಇಚ್ಛಿಸಿರುವೆನು. ಯುಕ್ತಿ ಪ್ರಯುಕ್ತಿಗಳಿಂದ ನೀನು ಪರ್ವತಸಿಂಹನ ಮನವೊಲಿಸಿ, ಅವನ ಪುತ್ರಿಯಾದ ಕನಕಲತೆಯನ್ನು ನನಗೆ ಲಗ್ನ ಮಾಡಿಕೊಡುವಂತೆ ಮಾಡಬೇಕು. ಪರ್ವತಸಿಂಹನು ಧರ್ಮದ ಕಟ್ಟಾಭಿಮಾನಿಯೆಂದು ಕೇಳಿರುವೆನು. ನೀನು ಅವನಿಗೆ ಚನ್ನಾಗಿ ಉಪದೇಶಿಸಿ ಕಾರ್ಯ ಸಾಧನೆ ಮಾಡು. ನಿನ್ನ ಚತುರತೆಗೆ ಸರಿಯಾಗಿ ಸಂಭಾವನೆಯು ಕೊಡಲ್ಪಡುವದು."

"ಹುಜೂರ, ನಾನೇನು ಸಂಭಾವನೆಯ ಆಶೆಗಾಗಿ ಕೆಲಸ ಮಾಡುವದಿಲ್ಲ. ಸ್ವಾಮಿಕಾರ್ಯವೆಂದು ಮನಃಪೂರ್ವಕವಾಗಿ ಪ್ರಯತ್ನಿಸುವೆನು. ನಾನು ಈಗಲೇ ಆಹೋರನಗರಕ್ಕೆ ಹೊರಡುವೆನು. ಪರ್ವತಸಿಂಗನಿಗೆ ಪತ್ರವನ್ನು ಕೊಡುವಿರೇನು?"

"ಓಹೋ, ಕೊಡುವೆನು." ಎಂದು ನುಡಿದು, ಅಹಮ್ಮದಶಹನು ಕರಣಿಕನನ್ನು ಕರೆಯಿಸಿ, ಅವನಿಂದ ಒಂದು ಪತ್ರ ಬರೆಯಿಸಿದನು. ಆ ಪತ್ರವನ್ನು ಬಾದಶಹನು ಸ್ವಹಸ್ತದಿಂದ ರೋಷನಖಾನನ ಕೈಯಲ್ಲಿ ಕೊಟ್ಟು:—"ರೋಷನಖಾನ, ಪರ್ವತಸಿಂಹನು ಒಳ್ಳೆಯ ಮಾತಿನಿಂದ ಒಪ್ಪದಿದ್ದರೆ, ಆಹೋರ ರಾಜಧಾನಿಯನ್ನೂ ದುರ್ಗವನ್ನೂ ಉಧ್ವಸ್ತಗೊಳಿಸಿಯಾದರೂ ಕನಕಲತೆಯನ್ನು ತರುವೆನು."

"ಖಾವಿಂದ, ತಾವು ಅಂತಹ ಶಕ್ತಿಸಂಪನ್ನರೇ ಇರುವಿರಿ. ಯುದ್ಧದ ವರೆಗೆ ಪ್ರಸಂಗವು ಬಾರದಂತೆ ಕಾರ್ಯ ಸಾಧನೆ ಮಾಡುವೆನು. ಈ ರೋಷನಖಾನನ ಚತುರತನದ ಸಾರ್ಥಕತೆಯ ಪ್ರಸಂಗವು ಇಷ್ಟು ದಿನಗಳಲ್ಲಿ ಇದೀಗ ಘಟಿಸಿತು."

ರೋಷನಖಾನನು ಬಾದಶಹನ ನಿರೋಪ ಹೊಂದಿ, ಧ್ರುತಗತಿಯ ತುರಗವನ್ನೇರಿ, ಆಹೋರ ರಾಜಧಾನಿಯ ದಾರೀ ಹಿಡಿದನು.

———

## ಅಹಮ್ಮದಶಹನ ಪತ್ರ.

ಹೋಡೀ ರಾಜ್ಯಾಧಿಪತಿಯಾದ ಪರ್ವತಸಿಂಹನು ರಾಜಭವನದಲ್ಲಿ ಸುಭೂಷಿತ ಸಿಂಹಾಸನದ ಮೇಲೆ ಕುಳಿತಿದ್ದನು. ಮಂತ್ರಿ-ಸೇನಾನಾಯಕರೂ ಉಳಿದ ಜನರೂ ತಮ್ಮ ತಮ್ಮ ಆಸನಗಳಲ್ಲಿ ಮಂಡಿಸಿದ್ದರು. ಯುವರಾಜ ಸತ್ಯೇಂದ್ರಸಿಂಹನು ಸಿಂಹಾಸನದ ಬಳಿಯಲ್ಲಿದ್ದ ಉಚ್ಚಾಸನದಲ್ಲಿ ಕುಳಿತುಕೊಂಡಿದ್ದನು. ಸಭೆಯ ಕಾರ್ಯವು ಪ್ರಾರಂಭವಾಯಿತು. ಕೆಲವು ವೇಳೆಯವರೆಗೆ ರಾಜಕಾರಣದ ಬಗ್ಗೆ ವಾದವಿವಾದ ನಡೆಯಿತು. ಆಗ ದೂತನೊಬ್ಬನು ಅಲ್ಲಿಗೆ ಬಂದು ಪರ್ವತಸಿಂಹನಿಗೆ ನಮಸ್ಕಾರ ಮಾಡಿ:—"ಮಹಾರಾಜರೇ, ಸಿಂಧದ ಬಾದಶಹರಾದ ಅಹಮ್ಮದಶಹರು ಒಬ್ಬ ಸರದಾರನನ್ನು ಕಳುಹಿಸಿರುವರು." ಎಂದು ಹೇಳಿದನು. ಮುಂದೆ ಸ್ವಲ್ಪ ಹೊತ್ತಿನಲ್ಲಿ ಸರದಾರ ರೋಷನಖಾನನು ರಾಜಸಭೆಯನ್ನು ಪ್ರವೇಶಿಸಿ, ಪರ್ವತಸಿಂಹನಿಗೆ ನಮಸ್ಕಾರ, ಮಾಡಿ ತನ್ನ ಬಳಿಯಲ್ಲಿದ್ದ ಪತ್ರವನ್ನು ಅವನ ಕಡೆಗೆ ಕೊಟ್ಟನು. ಪರ್ವತಸಿಂಹನು ಪತ್ರವನ್ನು ಕೈಯಲ್ಲಿ ತೆಗೆದುಕೊಂಡು, ಆ ಸರದಾರನನ್ನು ಉಚಿತಾಸನದಲ್ಲಿ ಕುಳಿತುಕೊಳ್ಳ ಹೇಳಿ, ಕರಣಿಕನನ್ನು ಕರೆದು, ಪತ್ರವನ್ನು ಓದ ಹೇಳಿದನು. ಕರಣಿಕನು ಪತ್ರವನ್ನು ಓದಲಾರಂಭಿಸಿದನು:

"ಹೋಡೀ ರಾಜ್ಯಾಧಿಪತಿಗಳಾದ ಪರ್ವತಸಿಂಹರೇ! ನೀವು ನನ್ನ ಸ್ನೇಹ ಕೃಪೆಗಳ ಸಂಪಾದನೆಗಾಗಿ ಆತುರರಾಗಿರುವಿರಷ್ಟೆ? ನಾನಾದರೂ ನಿಮ್ಮಂತಹ ಸಣ್ಣ ಪುಟ್ಟ ರಾಜರ ಹಾಗು ಮಂಡಲೇಶ್ವರರ ಸ್ನೇಹ ಬಯಸುತ್ತಿರುವೆನು. ಪರಸ್ಪರ ಸ್ನೇಹರಜ್ಜುವು ಬಲವತ್ತರವಾದಂತೆ ರಾಜ್ಯಕ್ಕೆ ಹೆಚ್ಚಾಗಿ ಸಾಮರ್ಥ್ಯವು ಬರುವದು. ಪರಚಕ್ರಗಳ ಭಯವಾಗುವದಿಲ್ಲ. ನೀವು ಈ ಧೂರ್ತತನದಿಂದ ನನಗೆ ಹಿಂದೆಯೊಮ್ಮೆ ಸೂಚಿಸಿದ್ದಿರಿ. ನಾನು ಆಗ ನಿಮ್ಮ ಮಾತಿನ ಮಹತ್ವ ತಿಳಿದಿರಲಿಲ್ಲ. ಈಗ ಅಲ್ಲಲ್ಲಿ ಪ್ರಬಲತರವಾದ ಪರಚಕ್ರಗಳ ಸುಳಿದಾಟವಾಗತೊಡಗಿದ್ದರಿಂದ ಸಣ್ಣ ದೊಡ್ಡ ರಾಜ್ಯಗಳೆಲ್ಲವೂ ಐಕ್ಯತೆಯಿಂದ ನಡೆಯುವದು ವಿಹಿತವೆಂಬ ಮಾತು ನನ್ನ ಸ್ಮೃತಿಪಟಲದಲ್ಲಿ ಬಂತು. ಪರಸ್ಪರರಲ್ಲಿ ಸ್ನೇಹಾಂತಃಕರಣಗಳು ನೆಲೆಗೊಂಡು ಬಹುಕಾಲದ ವರೆಗೆ ಉಳಿಯಬೇಕೆಂದು ನೀವಾದರೂ ಇಚ್ಛಿಸುತ್ತಿರುವಿರಿ; ನನ್ನದಾದರೂ ಹೀಗೆಯೇ ಅಭಿಪ್ರಾಯವುಂಟು. ನಿಮ್ಮಂತಹ ರಣಧುರಂಧರ ಕ್ಷತ್ರಿಯರ ಸ್ನೇಹದ ಆವಶ್ಯಕತೆಯು ನನಗಾದರೂ ಉಂಟು. ನಮ್ಮ ನಿಮ್ಮಲ್ಲಿ ಸ್ನೇಹಾಂತಃಕರಣಗಳು ಬಹು ದಿವಸ ಸ್ಥಿರವಾಗಿ ಉಳಿಯಬೇಕಾದರೆ, ಯಾವ ಹಂಚಿಕೆ ಮಾಡಬೇಕೆಂದು ಯೋಚಿಸಿದೆನು. ಅಷ್ಟರಲ್ಲಿ ನನ್ನ ವಿಶಾಲಬುದ್ಧಿಗೆ ಒಂದು ಸುಗಮವೂ ಸುಖಕರವೂ ಆದ ಯುಕ್ತಿಯು ತೋಚಿತು.

ಪ್ರಿಯದೋಸ್ತ ಪರ್ವತಸಿಂಹ! ನಿಮ್ಮ ಕುಮಾರಿಯಾದ ಕನಕಲತೆಯು ಸೌಂದರ್ಯದಲ್ಲಿ ಅದ್ವಿತೀಯಳಿರುವಳೆಂಬದನ್ನು ಕೇಳಿ ನನಗೆ ಆನಂದವಾಯಿತು. ಅಂತಹ ರೂಪವತಿಯು ಸಾಮಾನ್ಯ ರಾಜನ ಗೃಹದಲ್ಲಿ ಸೇರಬಾರದೆಂದು ನೀವು

ಇಚ್ಛಿಸುತ್ತಿರಲಿಕ್ಕೇ ಬೇಕು. ನನ್ನಂತಹ ಬಾದಶಹನ ಜನಾನಖಾನೆಯ ಸೌಂದರ್ಯವು ಅವಳ ಆಗಮನದಿಂದ ಶತಗುಣಿತವಾಗುವದೆಂದು ನನ್ನ ವಿಶ್ವಾಸವು ಇರುವದು. ಹೀಗೆ ಮಾಡಿದರೆ ಸ್ವರ್ಗೀಯ ಸುಂದರಿಯಾದ ಅವಳ ರೂಪ-ಸೌಂದರ್ಯಗಳು ಸಾರ್ಥಕ ಹೊಂದುವವು.

ನೀವು ನಿಮ್ಮ ಕುಮಾರಿಯನ್ನು ನನಗೆ ಧಾರೆಯೆರೆದು ಕೊಟ್ಟು ನನ್ನ ಸ್ನೇಹ-ಕೃಪೆಗಳನ್ನು ಸಂಪಾದಿಸಿಕೊಳ್ಳಲಿಕ್ಕೂ ನಿಮ್ಮ ಕುವರಿಯ ರೂಪ-ಸೌಂದರ್ಯಗಳನ್ನು ಸಾರ್ಥಕಗೊಳಿಸಲಿಕ್ಕೂ ಅತ್ಯಾನಂದದಿಂದ ಒಪ್ಪುವಿರೆಂದು ನನ್ನ ದೃಢವಾದ ವಿಶ್ವಾಸವುಂಟು. ನೀವು ಈ ಪತ್ರವನ್ನು ಓದಿದ ಕೂಡಲೆ ಅನುಕೂಲವಾದ ಉತ್ತರ ಕೊಡದೆ ಇರಲಾರಿರಿ.

ಇಷ್ಟಾಗಿಯೂ ನೀವು ನನ್ನ ಪತ್ರವನ್ನು ಉಪೇಕ್ಷಿಸಿದರೆ, ಸಿಂಧ ಬಾದಶಹನ ಸೇನಾಸಾಗರವು ಹೋಡೀ ರಾಜ್ಯವನ್ನು ಸ್ವಾಧೀನ ಪಡಿಸಿಕೊಂಡು, ರಾಜಪರಿವಾರ ಸಹಿತವಾದ ಆ ಹೋರ ರಾಜಧಾನಿ, ರಾಜಮಂದಿರ, ದುರ್ಗಗಳನ್ನು ಉಧ್ವಸ್ತಗೊಳಿಸಿ, ಲಾವಣ್ಯಮಯಿ ರಾಜಕುಮಾರಿಯಾದ ಕನಕಲತೆಯನ್ನು ಸ್ವಾಧೀನಪಡಿಸಿಕೊಳ್ಳಲಿಕ್ಕೆ ಸಮರ್ಥವಿರುವದು.

ನಿಮ್ಮಲ್ಲಿ ಅನುಚಿತವಾದ ಆತ್ಮನಾಶ ವಿಚಾರಗಳು ತಲೆದೋರಲಾರವೆಂದೇ ನನ್ನ ತಿಳುವಳಿಕೆ. ನಿಮ್ಮ ಭಾವೀ ಜಾಮಾತ,

ಅಹಮ್ಮದಶಹ''

ಪತ್ರದಲ್ಲಿಯ ಸಂಗತಿಯನ್ನು ಕೇಳಿ ಓಲಗದೊಳಗಿನ ಪ್ರತಿಯೊಬ್ಬ ರಜಪುತ ವೀರನ ಅಂತಃಕರಣದಲ್ಲಿ ಕೋಲಾಹಲವೆದ್ದಿತು. ಎಲ್ಲರ ನೇತ್ರಗಳು ಬೆಂಕಿಯನ್ನು ಕಾರುತ್ತಿರುವಂತೆ ಕಾಣಹತ್ತಿದವು. ಪರಕ್ಷಣದಲ್ಲಿ ಅವರು ಆಸನದಿಂದೆದ್ದು ತಮ್ಮ ಖಡ್ಗಗಳನ್ನು ಒರೆಯಿಂದ ಹಿರಿದು ಯವನ ಸರದಾರನ ಕಡೆಗೆ ಧಾವಿಸಿ ಹೋಗುವ ಹವಣಿಕೆಯಲ್ಲಿದ್ದರು. ಶಿಪ್ಪಾಯಿಗೆ ಬಂದ ಸರದಾರನಾದ ರೋಷನಖಾನನು ಈ ಭೀಷಣ ದೃಶ್ಯವನ್ನು ನೋಡಿ ಎದೆಯೊಡೆದು, ತನ್ನ ದೇಹವು ಇಷ್ಟು ಖಡ್ಗಗಳ ಆಘಾತದಿಂದ ಎಷ್ಟು ಚೂರುಗಳಾಗಬಹುದೆಂದು ಲೆಕ್ಕ ಹಾಕಹತ್ತಿದನು. ಅವನಿಗೆ ಆ ಲೆಕ್ಕವು ಬಗೆಹರಿಯಿತೋ ಇಲ್ಲವೋ ಅಷ್ಟರಲ್ಲಿ ಪರ್ವತಸಿಂಹನು—"ಸಾವಧಾನ!" ಎಂದು ನುಡಿದು—"ಶಾಂತರಾಗಿರಿ, ಶಾಂತರಾಗಿರಿ. ನಿಮ್ಮ ಖಡ್ಗಗಳನ್ನು ಒರೆಗಾಣಿಸಿರಿ. ನಿಮ್ಮ ವೀರ ಖಡ್ಗಗಳು ಮದಾಂಧನಾದ ಅಹಮ್ಮದಶಹನನ್ನೇ ಶತಛಿದ್ರ ಮಾಡಬೇಕಲ್ಲದೆ, ಅವನ ದೂತನನ್ನು ಗಾಸಿಗೊಳಿಸಬಾರದು. ನಿಮ್ಮ ಕ್ರೋಧಾಗ್ನಿಯು ಆ ಮದಾಂಧ ಶಹನನ್ನೇ ಸುಡಬೇಕಲ್ಲದೆ, ನಿರಪರಾಧಿ ಸೇವಕನಿಗೆ ಅದರ ಜಳವು ತಗಲಬಾರದು. ಈ ಸರದಾರನು ತಪ್ಪುಗಾರನಲ್ಲ; ಇವನು ಆ ತಪ್ಪುಗಾರನ ಆಜ್ಞೆಯ ದಾಸನು. ಖಡ್ಗಗಳನ್ನು ಒರೆಗಾಣಿಸಿ ಎಲ್ಲರೂ ನಿಮ್ಮ ಆಸನಗಳಲ್ಲಿ ಕುಳಿತುಕೊಳ್ಳಿರಿ."

ಪರ್ವತಸಿಂಹನ ಆಜ್ಞೆಯ ಮೇರೆಗೆ ಎಲ್ಲರೂ ತಮ್ಮ ಖಡ್ಗಗಳನ್ನು ಒರೆಗಾಣಿಸಿ ಕುಳಿತುಕೊಂಡರು. ಅನಂತರದಲ್ಲಿ ಪರ್ವತಸಿಂಹನು ಮಂತ್ರಿಯನ್ನು ಕುರಿತು: "ಸಚಿವರೆ, ಅಹಮ್ಮದಶಹನ ಪತ್ರಕ್ಕೆ ಏನೆಂದು ಉತ್ತರ ಬರೆಯಬೇಕು?"

'ಮಹಾರಾಜರೆ,' ಮಂತ್ರಿಯು ಎದ್ದು ನಿಂತು ಕೈ ಜೋಡಿಸಿ—"ಎಲ್ಲ ವೀರರು ತಮ್ಮ ಅಭಿಪ್ರಾಯಗಳನ್ನು ಈಗ ಸೂಚಿಸಿರುವರು. ಅವರ ಸಲಹೆಯನ್ನು ಬಿಟ್ಟು ನನ್ನ ಸಲಹೆಯು ಬೇರೆಯಾಗುವ ಬಗೆ ಹೇಗೆ?"

ಪರ್ವತಸಿಂಹನು ಸೇನಾಪತಿಯಾದ ಠಾಕುರ ಮಾನಸಿಂಹನನ್ನು ಕುರಿತು:— 'ಸೇನಾಪತಿಗಳೆ, ನಿಮ್ಮ ಅಭಿಪ್ರಾಯವೇನು?'

"ಮಹಾರಾಜರೆ, ನನ್ನ ಖಡ್ಗವು ಯವನ ರಕ್ತ ಪಿಪಾಸುವಾಗಿದೆ." ಎಂದು ಮಾನಸಿಂಹನು ಖಡ್ಗವನ್ನು ಒರೆಯಿಂದ ಹಿರಿದು ಝಳಪಿಸುತ್ತ ನುಡಿದನು.

ಅನಂತರದಲ್ಲಿ ಪರ್ವತಸಿಂಹನು ರೋಷನಖಾನನನ್ನು ಕುರಿತು:—"ರೋಷನಖಾನ, ರಜಪುತ ಕುಲಸ್ತ್ರೀಯರೆಂದರೆ, ಪೇಟಿಯೊಳಗಿನ ಆಟಿಗೆಯ ಗೊಂಬೆಗಳೆಂದು ನಿನ್ನ ಬಾದಶಹನು ತಿಳಿದಿರುವನೇನು?"

"ಮಹಾರಾಜರೆ!" ರೋಷನಖಾನನು ಒಳ್ಳೆಯ ಧೈರ್ಯವನ್ನು ತಂದುಕೊಂಡು--"ಓಲಗದೊಳಗಿನ ವೀರರ ಹಾವ-ಭಾವಗಳೂ ಭಾಷಣಗಳೂ ಬಾದಶಹನ ಪತ್ರಕ್ಕೆ ಉತ್ತರ ಕೊಟ್ಟಿರುವವು. ಇನ್ನು ನಾನು ಹೋಗುವೆನು; ಆಜ್ಞೆ ಕೊಡಿರಿ."

"ರೋಷನಖಾನ, ನಿಮ್ಮ ಬಾದಶಹನು ತನ್ನ ಅಭಿಪ್ರಾಯವನ್ನು ಪತ್ರದಲ್ಲಿ ಬರೆದು ತಿಳಿಸಿರುವನು. ನಾವು ನಮ್ಮ ಅಭಿಪ್ರಾಯದ ಗುರುತು ಕೊಡದೆ, ಹಾಗೆಯೇ ನಿನ್ನನ್ನು ಕಳಿಸಲಾರೆವು."

'ವಿಚಾರ ಮಾಡಿ ಉತ್ತರ ಕೊಡಿರೆಂದರಾಯಿತು,' ಎಂದು ರೋಷನಖಾನನು ಪರ್ವತಸಿಂಹನಿಗೆ ಸೂಚಿಸಿದನು.

"ವಿಚಾರಕ್ಕೆ ವಿಲಂಬವಾಗುವದು. ನಾನು ನನ್ನ ಮಂತ್ರಿ-ಸೇನಾಪತಿಗಳೊಡನೆ ವಿಚಾರ ವಿನಿಮಯ ಮಾಡಿಯೇ ನಿನ್ನ ಬಾದಶಹನ ಪತ್ರಕ್ಕೆ ಉತ್ತರ ಕೊಡುವೆನು. ಅಲ್ಲಿಯ ವರೆಗೆ ಆತಿಥ್ಯವನ್ನು ಸ್ವೀಕರಿಸುತ್ತ ಆಹೋರ ರಾಜಧಾನಿಯಲ್ಲಿರು"

"ಮಹಾರಾಜರೆ," ರೋಷನಖಾನನು ಭಯಭೀತ ವಾಣಿಯಿಂದ—"ನಾನು ಮಾತಾಡಬೇಕೆನ್ನುವೆನು."

"ಏನೂ ಅಡ್ಡಿಯಿಲ್ಲ. ನೀವು ಮಾತಾಡಲಿಕ್ಕೆ ಅಂಜುವದೇಕೆ? ನಿರ್ಭಯವಾಗಿ ಮಾತಾಡಿರಿ."

'ಶೀಘ್ರಕೋಪಿಗಳಾದ ನಿಮ್ಮ ಪರಿವಾರವನ್ನು ಕಂಡು ಅಂಜಿಕೆಯಾಗುವದು.'

"ಅವರಿಂದಲೂ ನಿನಗೆ ಭಯವಿಲ್ಲ. ನಿನ್ನ ಮನೋದಯವೇನು?"

"ಮಹಾರಾಜರೆ, ನಮ್ಮ ಬಾದಶಹರಾದ ಅಹಮ್ಮದಶಹರ ಯಶೋಗೌರವವನ್ನೂ ಪರಾಕ್ರಮ ಖ್ಯಾತಿಯನ್ನೂ ನೀವು ಕೇಳಿರುವಿರಿ. ನೀವು ಅಂಥವರೊಡನೆ

ಸ್ನೇಹ ಬೆಳೆಯಿಸಿದರೆ ಹಾನಿಯಾಗುವದಿಲ್ಲ. ಅವರ ಕೃಪಾಸಂಪಾದನೆಯಿಂದ ನಿಮಗೆ ಲಾಭವೇ ಇರುವದು. ಕೇವಲ ಧರ್ಮದ ಅಂಧಶ್ರದ್ಧೆಗೆ ಕಟ್ಟು ಬಿದ್ದು ನೀವು ಆತ್ಮ ನಾಶ ಮಾಡಿಕೊಳ್ಳುವಿರಿ. ನೀವು ವಿಚಾರವಿನಿಮಯ ಮಾಡಿ, ಕೊಡುವ ಉತ್ತರದ ಪಡಿಕಟ್ಟನ್ನು ನಾನು ಅರಿತಿರುವದರಿಂದಲೇ ಉತ್ತರ ಕೊಡುವ ಪೂರ್ವದಲ್ಲಿ ನಿಮಗೆ ನಾನು ಸಮಯ ಸೂಚನೆ ಮಾಡಿರುವೆನು. ಯವನರೊಡನೆ ಶರೀರ ಸಂಬಂಧ ಮಾಡುವ ಪ್ರಾಘಾತವು ಈಗೇನು ಹೊಸದಲ್ಲ. ನೀವು ನಿಮ್ಮ ಬಾಲಿಕೆಯನ್ನು ಬಾದಶಹರಿಗೊಪ್ಪಿಸಿ, ಮುಂದೊದಗಬಹುದಾದ ಅನರ್ಥವನ್ನು ತಪ್ಪಿಸುವದು ಉಚಿತ ವಾದ ಮಾರ್ಗವು.''

ಮತ್ತೆ ಸಭಿಕರ ಹೃದಯಗಳು ಸಂತಪ್ತವಾದವು. ಆಗ ಯುವರಾಜ ಸತ್ಯೇಂದ್ರಸಿಂಹನು ಕ್ರುದ್ಧವಾಣಿಯಿಂದ—''ಮಹಾರಾಜರಿಂದ ಅಭಯ ಪಡೆದು ಉದ್ದಾಮ ತನದಿಂದ ವರ್ತಿಸುವೆಯಾ? ಇನ್ನು ಮುಂದೆ ಈ ವಿಷಯವನ್ನೆತ್ತಿದರೆ ನಿನ್ನ ನಾಲಿಗೆಯು ಶೀಳಿಸಲ್ಪಡುವದು. ಈ ವಿಷಯವು ನಿನ್ನದಲ್ಲ. ನೀನು ಶಿಷ್ಟಾಯಿಗಾಗಿ ಬಂದ ಪ್ರತಿನಿಧಿಯಲ್ಲ. ಪತ್ರ ತಂದ ದೂತನಿರುವೆ. ನಾವು ಕೊಡುವ ಉತ್ತರ ವನ್ನು ತೆಗೆದುಕೊಂಡು ಹೋಗುವದಷ್ಟು ನಿನ್ನ ಕೆಲಸವು. ಹೆಚ್ಚಿನ ಉಪದ್ವ್ಯಾಪ ಮಾಡಿದರೆ, ಜೀವಕ್ಕೆ ಎರವಾಗುವೆ!''

''ನಾನು ನಿಮ್ಮ ಹಿತಕ್ಕಾಗಿಯೇ ನನ್ನ ಅಭಿಪ್ರಾಯ ತಿಳಿಸಿದೆನು. ಇದರ ಮೇಲೆ ನಿಮ್ಮ ಇಚ್ಛೆ.''

'ನೀನೇನೂ ನಮ್ಮ ಯೋಗಕ್ಷೇಮ ತೆಗೆದುಕೊಳ್ಳುವ ಆವಶ್ಯಕತೆಯಿಲ್ಲ.' ಎಂದು ಸತ್ಯೇಂದ್ರಸಿಂಹನು ಗರ್ಜಿಸಿದನು.

ರೋಷನಖಾನನು ತನ್ನ ಆಸನದ ಮೇಲೆ ಕುಳಿತನು. ಅನಂತರದಲ್ಲಿ ಪರ್ವತ ಸಿಂಹನು:—''ರೋಷನಖಾನ, ನೀನು ತಂದ ಪತ್ರಕ್ಕೆ ಉತ್ತರವನ್ನೇನು ಕೊಡಬೇಕೆಂಬದು ನಿರ್ಧಾರವಾಗಿದ್ದರೂ, ಹೇಗೆ ಯಾವ ವಿಧದಿಂದ ಕೊಡಬೇಕೆಂಬದನ್ನು ವಿಚಾರವಿನಿಮಯದಿಂದ ತಿಳದುಕೊಳ್ಳುವೆನು. ಅಲ್ಲಿಯ ವರೆಗೆ ನೀನು ಕಾವಲುಗಾರರಿಂದ ಪರಿವೇಷ್ಟಿತವಾದ ಮಂದಿರದಲ್ಲಿರತಕ್ಕದ್ದು.''

''ಏನು, ನನ್ನನ್ನು ಸೆರೆಯಲ್ಲಿಡುವಿರಾ?''

''ಸೆರೆಮನೆಯಲ್ಲಿಡುವದಿಲ್ಲ; ಕಣ್ಣುಕಟ್ಟಿನಲ್ಲಿರಿಸುವೆನು. ಯಾಕಂದರೆ, ಒಂದು ವೇಳೆ ನೀನು ಪತ್ರದ ಉತ್ತರವನ್ನು ಒಯ್ಯದೆ, ಹಾಗೆಯೇ ಜಾರಿ ಹೋಗಬಹುದೆಂಬ ಸಂಶಯವುಂಟು.''

ರೋಷನಖಾನನನ್ನು ಅರಮನೆಯ ಬಳಿಯಲ್ಲಿದ್ದ ಒಂದು ಮಂದಿರದಲ್ಲಿರಿಸಿ, ಸುತ್ತಲೂ ಕಾವಲುಗಾರರನ್ನಿಡುವದಕ್ಕೆ ಪರ್ವತಸಿಂಹನು ನಗರದ ಶಾಂತಿರಕ್ಷಕನಿಗೆ ಸೂಚಿಸಿದನು. ಮುಂದೆ ಸ್ವಲ್ಪ ವೇಳೆಯಲ್ಲಿ ಸಭೆಯು ವಿಸರ್ಜಿಸಲ್ಪಟ್ಟಿತು.

---

## ಖಡ್ಗವೇ ಪತ್ರದ ಉತ್ತರ.

ತನ್ನ ಪತ್ರಕ್ಕೆ ಅನುಕೂಲವಾದ ಉತ್ತರವು ಬೇಗನೆ ಬರುವದೆಂದೇ ಅಹಮ್ಮದ ಶಹನ ತಿಳುವಳಿಕೆ. ಅವನು ತನ್ನ ತಿಳುವಳಿಕೆಗನುಸಾರವಾಗಿ ಕಾರ್ಯಗಳನ್ನು ಮಾಡತೊಡಗಿದನು. ಸುಲಲಿತ ನವಯುವತಿಯ ಶುಭಾಗಮನವಾಗುವದೆಂಬ ಸಂಭ್ರಮದಿಂದ ಅವನು ಅರಮನೆ-ಅಂತಃಪುರಗಳನ್ನು ಸಿಂಗರಿಸಲಿಕ್ಕೆ ಕೆಲಸಗಾರರಿಗೆ ಆಜ್ಞೆ ಮಾಡಿದನು. ರಾಜಧಾನಿಯು ಸಿಂಗರಿಸಲ್ಪಟ್ಟಿತು. ವಿವಾಹದ ಪೂರ್ವಸಿದ್ಧತೆಯು ನಡೆಯಿತು. ಸರ್ವಸಮರ್ಥನಾದ ತನ್ನ ಮನಸ್ಸಿನ ವಿರುದ್ಧವಾದ ವರ್ತನವು ಕ್ಷೀಣಬಲನಾಗಿದ್ದ ಪರ್ವತಸಿಂಹನಿಂದ ಘಟಿಸಲಾರದೆಂದೇ ಬಾದಶಹನ ದೃಢವಾದ ವಿಶ್ವಾಸವಿತ್ತು. ಬಾದಶಹನು ವಿವಾಹಾತುರನಾಗಿದ್ದನು. ಪತ್ರೋತ್ತರವು ಬಂದ ಮೇಲೆ, ವಿವಾಹ ಸಮಾರಂಭದ ಸಿದ್ಧತೆಗಾಗಿ ಅವಸರವಾಗಬಾರದೆಂದು, ಅವನು ಮುಂಜಾಗ್ರತೆಯಿಂದ ಕಾರ್ಯಪ್ರವೃತ್ತನಾಗಿದ್ದನು. ಅಂತಃಪುರವಂತೂ ವಿಲಕ್ಷಣವಾದ ಸಡಗರ ಹೊಂದಿತು.

ರೋಷನಖಾನನು ಆಹೋರಕ್ಕೆ ಹೋದಾಗಿನಿಂದ ಅಹಮ್ಮದಶಹನಿಗೆ ಒಂದೊಂದು ದಿನವು ಒಂದೊಂದು ಯುಗದಂತೆ ಭಾಸವಾಗಹತ್ತಿತ್ತು. ನಾಲ್ಕಾರು ದಿನಗಳಲ್ಲಿ ದೂತನು ಬರಬಹುದೆಂದು ಅವನ ಭಾವನೆಯಿತ್ತು. ಆ ಅವಧಿಯ ಮುಂದೆ ಮತ್ತೆ ಕೆಲವು ದಿನಗಳು ಗತಿಸಿದರೂ ಅತ್ತ ಕಡೆಯ ಸಮಾಚಾರವೇ ತಿಳಿಯಲಿಲ್ಲ. ದಿನಾಲು ಆಹೋರದ ಮಾರ್ಗಪ್ರತೀಕ್ಷೆ ಮಾಡಿ ಮಾಡಿ ಅವನ ಕಣ್ಣುಗಳು ಒಡೆದಂತಾದವು. ಆಗ ಅವನು ವಿಚಾರಕ್ಕೊಳಗಾದನು. ಒಂದೊಂದೇ ದುಷ್ಟ ವಿಚಾರಗಳು ಅವನಲ್ಲಿ ಹುಟ್ಟಿದವು. ಅವನಲ್ಲಿ ಮೊದಲು ಉದಯವಾಗಿದ್ದ ಸುಂದರವಾದ ವಿಚಾರಗಳು ಒಂದೊಂದಾಗಿ ನಾಶಹೊಂದಹತ್ತಿದವು. ಮನಸ್ಸು ಅನೇಕ ಶಂಕೆ ಕುಶಂಕೆಗಳಿಂದ ಉದ್ವಿಗ್ನವಾಯಿತು. ಶುಭಕಾರ್ಯದಲ್ಲಿ ವಿಘ್ನವೊದಗಿ ನಿಯಮಿಸಿದ ಮುಹೂರ್ತಕ್ಕೆ ವಿವಾಹವಿಧಿಯು ಜರುಗದೆ ಮುಂದೆ ಬೀಳುವದೆಲ್ಲಿಯೋ ಎಂಬ ವಿಚಾರದಿಂದ ಅವನು ತಳಮಳಗೊಂಡನು. ವಿವಾಹದ ಸಮಾಚಾರವು ಇಂದು ಬರಬಹುದು; ನಾಳೆ ಬರಬಹುದು, ಎಂದು ಸುಮಾರು ಒಂದು ತಿಂಗಳ ವರೆಗೆ ರೋಷನಖಾನನ ಮಾರ್ಗಪ್ರತೀಕ್ಷೆ ಮಾಡಿದನು. ಅನಂತರದಲ್ಲಿ ಮಾತ್ರ ಅವನ ಆನಂದಮಯಿಯಾದ ಹೃದಯವು ಅತ್ಯಂತ ಉದ್ವಿಗ್ನವಾಯಿತು. ಆಗ ಅವನು ಪ್ರಧಾನ ಸಚಿವನಾದ ನಿಜಾಮು ಉದ್ದೌಲನನ್ನು ಕರೆಯಿಸಿದನು.

'ಜನಾಬ!' ಅಹಮ್ಮದಶಹನು ಮಂತ್ರಿಯನ್ನು ಕುರಿತು ವಿಷಣ್ಣನಾಗಿ- ಆಹೋರಕ್ಕೆ ಸರದಾರ ರೋಷನಖಾನನನ್ನು ಕಳುಹಿಸಿ ಒಂದು ತಿಂಗಳಾಯಿತು. ಇದುವರೆಗೆ ಅತ್ತಕಡೆಯ ವೃತ್ತಾಂತವು ಏಕೆ ತಿಳಿಯಲಿಲ್ಲ?'

"ಹುಜೂರ, ನೀವು ಮುಂದಾಗಿ ವಿವಾಹಸೌರಣೆ ನಡೆಯಿಸಿದ್ದು ಯಥಾಯೋಗ್ಯವಾಗಲಿಲ್ಲ; ಯುದ್ಧಸೌರಣೆ ನಡೆಯಿಸಿದ್ದರೆ ಒಳಿತಾಗುತ್ತಿತ್ತು."

"ಮಂತ್ರಿಶ್ರೇಷ್ಠರೆ, ಅದೇಕೆ ನೀವು ಹೀಗೆ ಮಾತಾಡುವಿರಿ? ಶುಭ ಕಾಲಶುಭ ಪ್ರಸಂಗದಲ್ಲಿ ಶುಭ ನುಡಿಯುವದನ್ನು ಬಿಟ್ಟು—"

"ಶುಭ ಚಿಹ್ನವಿಲ್ಲ."

"ನೀವು ಹೇಗೆ ತರ್ಕಿಸುವಿರಿ?"

"ತರ್ಕವಲ್ಲ, ಪ್ರತ್ಯಕ್ಷವು. ರೋಷನಖಾನನ ವೃತ್ತಾಂತವನ್ನು ತಿಳಿದುಕೊಂಡು ಬರುವದಕ್ಕಾಗಿ ದೂತನನ್ನು ಕಳುಹಿಸಿದ್ದೆನು."

"ನೀವೇ ದೂತನನ್ನು ಕಳುಹಿಸಿದ್ದಿರೇನು?"

"ಹೌದು."

"ಮುಂದೇನಾಯಿತು?" ಆತುರತೆಯಿಂದ ಶಹನು ಕೇಳಿದನು.

"ದೂತನು ಇದೀಗ ಬಂದನು."

"ಅವನು ಯಾವ ವಾರ್ತೆಯನ್ನು ತಂದಿರುವನು?"

"ರೋಷನಖಾನನು ಸೆರೆಗೊಳಗಾಗಿರುವನಂತೆ. ವಿಚಾರ ವಿನಿಮಯ ಮಾಡಿ ಉತ್ತರ ಕೊಡುವೆನೆಂದು ಪರ್ವತಸಿಂಹನು ಅವನಿಗೆ ಹೇಳಿ, ಯುದ್ಧದ ಸಿದ್ಧತೆ ನಡೆಯಿಸಿರುವನಂತೆ. ಈಗಾಗಲೆ ಅವನು ತನ್ನ ಸೈನ್ಯ ರಾಜಪರಿವಾರ ಸಹಿತವಾಗಿ ಆಹೋರದ ಭದ್ರವಾದ ಕೋಟೆಯನ್ನು ಸೇರಿರುವನಂತೆ. ಇನ್ನೆಲ್ಲಿಯ ವಿವಾಹವು? ಇನ್ನೆಲ್ಲಿಯ ಶುಭವು?"

"ಮತ್ತೆ.ಅಶುಭವನ್ನು ನುಡಿಯುವಿರಲ್ಲ? ಆಹೋರದ ಕೋಟೆ-ಕೊತ್ತಳಗಳನ್ನು ನಾಶ ಮಾಡಿ, ಪರ್ವತಸಿಂಹನನ್ನು ಪರಿವಾರ ಸಹಿತ ಉಧ್ವಸ್ತಗೊಳಿಸಿ ಕನಕಲತೆಯನ್ನು ತಂದರೆ, ವಿವಾಹದಂತಹ ಶುಭ ಪ್ರಸಂಗಗಳೇನು ಕಡಿಮೆ?"

"ನಿಮ್ಮ ವಿಧ್ವಂಸ-ಉಧ್ವಸ್ತಗಳ ಕೋಲಾಹಲದಲ್ಲಿ ಕನಕಲತೆಯು ಉಳಿದರೆ ತಾನೆ ಮುಂದಿನ ಶುಭಾಗಮವು. ಇಲ್ಲದಿದ್ದರೆ ಅಲ್ಲಾಉದ್ದೀನ ಖಿಲಜಿಯು ಚಿತೋಡನ್ನು ಮುತ್ತಿ ಸಹಸ್ರಾರು ಸಾಧ್ವಿಯರ ದೇಹಭಸ್ಮವನ್ನು ಕಂಡು ಬಂದಂತಾಗುವದು."

"ವಜೀರ, ನೀವು ಏಕೋ ಅಪಶಕುನವನ್ನೇ ಆಡುತ್ತಿರುವಿರಿ. ನಿಮ್ಮ ಬುದ್ಧಿಯು ಭ್ರಮಿಷ್ಟವಾಗಿರುವದೇನು?"

"ಹುಜೂರ, ಕ್ಷಮಿಸಿರಿ. ನಾನು ವಸ್ತುಸ್ಥಿತಿಯನ್ನು ನಿವೇದಿಸಿದೆನಲ್ಲದೆ, ಅರುಚಿಕಾರಕ ಮಾತುಗಳನ್ನಾಡಿ ನಿಮ್ಮ ಮನಸನ್ನು ಅಸಂತುಷ್ಟಪಡಿಸಬೇಕೆಂದು ನನ್ನ ಸಾಹಸವಿಲ್ಲ. ರಜಪುತರು ಧರ್ಮದ ಕಟ್ಟಾ ಅಭಿಮಾನಿಗಳಿರುವರು. ಪರ್ವತಸಿಂಹನು ಅತ್ಯಂತ ಧರ್ಮನಿಷ್ಠನಿರುವನೆಂಬ ಸಂಗತಿಯನ್ನು ನಾನು ಕೇಳಿರುವೆನು. ಅದಕ್ಕಾಗಿಯೇ ನಿಮ್ಮ ಮನಸ್ಸು ನೋಯುವಂಥ ಮಾತನಾಡಬೇಕಾಯಿತು. ಜಹಾಂಪನಾಹ, ನೀವು ಆ ರಾಜಪುತಾನಿಯ ಹವ್ಯಾಸಕ್ಕೆ ಹೋಗಬೇಡಿರಿ."

"ಇದೇನು ವಜೀರ? ಆ ಲಾವಣ್ಯಲಲಿತೆಯನ್ನು ಯಾವಾಗ ವಶಪಡಿಸಿಕೊಳ್ಳುವೆನೋ, ಎಂದು ಮನಸ್ಸು ಆತುರಗೊಂಡಿರುವಾಗ ನೀವು ಹೀಗೇಕೆ ಸಲಹೆ ಕೊಡು

ತ್ತಿರುವಿರಿ? ಒಂದುವೇಳೆ ಈ ದೇಹವನ್ನು ತ್ಯಜಿಸುವೆನು; ಆದರೆ ಕನಕಲತೆಯ ಆಶೆ ಯನ್ನು ಮಾತ್ರ ತ್ಯಜಿಸಲಾರೆನು. ಪರ್ವತಸಿಂಹನು ನನಗೆ ಮೀರಿರುವನೇನು? ಖಡ್ಗಬಲದಿಂದಲಾದರೂ ನಾನು ನನ್ನ ಕಾರ್ಯವನ್ನು ಈಡೇರಿಸಿಕೊಳ್ಳುವೆನು''

ಅಹಮ್ಮದಶಹನು ಹೀಗೆ ನುಡಿಯುತ್ತಿರುವಾಗ ರೋಷನಖಾನನು ಅಲ್ಲಿಗೆ ಬಂದನು. ಅವನನ್ನು ನೋಡಿದೊಡನೆಯೇ ಶಹನಿಗೆ ಹೇಳಕೂಡದಷ್ಟು ಆನಂದವಾಯಿತು. ಆಗ ಅವನು ಆತುರದಿಂದ—"ರೋಷನಖಾನ, ಶುಭವಾರ್ತೆಯನ್ನು ತಂದಿರುವೆಯಾ?"

"ವಾರ್ತೆಯನ್ನಂತು ತೆಗೆದುಕೊಂಡು ಜೀವಂತವಾಗಿ ಬಂದಿರುವೆನು. ತಂದ ವಾರ್ತೆಯು ಶುಭವೊ-ಅಶುಭವೋ ಎಂಬದನ್ನು ಖಾವಿಂದರವರೇ ಪರ್ಯಾಲೋಚಿಸ ಬೇಕು.''

"ರೋಷನಖಾನ, ಪರ್ವತಸಿಂಹನು ಏನು ಅನ್ನುತ್ತಿರುವನು? ನನ್ನ ಪತ್ರಕ್ಕೆ ಏನು ಉತ್ತರ ಕೊಟ್ಟಿರುವನು?''

"ಇದು ನೋಡಿರಿ. ಖಡ್ಗವೇ ಪತ್ರದ ಉತ್ತರವು!'' ಎಂದು ರೋಷನ ಖಾನನು ನುಡಿದು, ಪರ್ವತಸಿಂಹನು ಕೊಟ್ಟ ಖಡ್ಗವನ್ನು ಅಹಮ್ಮದಶಹನ ಮುಂದೆ ಇಟ್ಟನು.

"ಖಾವಿಂದ, ರಜಪುತರು ಧರ್ಮದ ಕಟ್ಟಾಭಿಮಾನಿಗಳೆಂದು ನಾನು ಮೊದಲೇ ಹೇಳಲಿಲ್ಲವೆ? ಪರ್ವತಸಿಂಹನಂತು ಉಜ್ವಲ ಕ್ಷತ್ರಿಯನು; ಸ್ವಾಭಿಮಾನಿಯು. ಅಂತ ಹನು ತನ್ನ ಕನ್ನಿಕೆಯನ್ನು ಯವನರಿಗೆ ಕೊಟ್ಟು ಶೀಲಭ್ರಷ್ಟನಾಗಲಾರನು,'' ಎಂದು ನಿಜಾಮ ಉದ್ದೌಲನು ನುಡಿದನು.

"ಜಹಾಂಪನಾಹ, ಈಗ ಪರ್ವತಸಿಂಹನು ಆಹೋರದ ಕೋಟೆಯನ್ನು ಸೇರಿ ಯುದ್ಧದ ಅಪೂರ್ವ ಸಿದ್ಧತೆಯನ್ನು ನಡೆಯಿಸಿರುವನು,'' ಎಂದು ರೋಷನಖಾನನು ಮತ್ತೆ ಸೂಚಿಸಿದನು.

ಅಹಮ್ಮದಶಹನು ಮತ್ತೆ ನಿರುತ್ಸಾಹಿಯಾದನು. ಅವನ ಆಶೆಯು ಸಂಪೂ-ರ್ಣವಾಗಿ ನಿಷ್ಫಲವಾಯಿತು. ಕೂಡಲೆ ಅವನ ಹೃದಯವು ಕ್ರೋಧಾಗ್ನಿಯಿಂದ ತುಂಬಿತು. ಆಗ ಅವನು ಸಂತಾಪದಿಂದ—"ವಜೀರ, ಪರ್ವತಸಿಂಹನಿಗೆ ರಾಜ್ಯ ವೈಭವವೂ ಜೀವವೂ ಬೇಡಾಗಿರುವದರಿಂದಲೇ ಹೀಗೆ ಉನ್ಮತ್ತವಾಗಿ ವರ್ತಿಸ ತೊಡಗಿರುವನು. ಯಾರೊಡನೆ ಪ್ರಸಂಗವಿರುವದೆಂಬದನ್ನು ಮರೆತು ಅವನು ಸರ್ವನಾಶಮಾಡಿಕೊಳ್ಳಲಿಕ್ಕೆ ಸಿದ್ಧನಾದನು. ರೋಷನಖಾನ ಯುದ್ಧದ ಸಿದ್ಧತೆ ಮಾಡುವ ಬಗ್ಗೆ ಮುಖ್ಯಸೇನಾಪತಿಗೆ ನನ್ನ ಆಜ್ಞೆಯನ್ನು ತಿಳಿಸು."

"ಹುಜೂರ, ತಮ್ಮ ಆಜ್ಞೆಯಂತೆ ವರ್ತಿಸುವೆನು."

"ರೋಷನ, ಪರ್ವತಸಿಂಹನು ನಮ್ಮ ಗೌರವಕ್ಕೆ ಭಂಗವನ್ನುಂಟು ಮಾಡುವ ಭಾಷಣ ಮಾಡಿರಬಹುದಲ್ಲವೇ?''

"ಹೌದು. ಆ ಕ್ಷತ್ರಿಯ ವೀರನು ತನ್ನ ಶೀಲ-ಗೌರವಗಳಿಗೆ ಸರಿಯಾಗಿ ಮಾತನಾಡಿರುವನು. 'ರಜಪೂತರ ದೇಹದಲ್ಲಿಯ ದೀಪ ನಿರ್ವಾಣವಾಗುವ ವರೆಗೂ ಕುಲೀನ ಪ್ರತಿಷ್ಠಿತ ಲಲನೆಯರನ್ನು ವಶಮಾಡಿಕೊಳ್ಳುವ ಸಾಮರ್ಥ್ಯವು ಯಾರಲ್ಲಿಯೂ ಇಲ್ಲ. ಅದೂರದರ್ಶಿಯಾದ ಬಾದಶಹನು ಸೆರೆಮನೆಯನ್ನು ಸೇರಬೇಕೆಂದು ಸಾಹಸ ಮಾಡಿರುವನು. ರಜಪುತರ ದಮನಿಯಲ್ಲಿ ರಕ್ತವು ಹರಿಯುವ ವರೆಗೆ ಕನಕಲತೆಯು ಅಸಾಧ್ಯಳು. ಅವಳನ್ನು ಬಾದಶಹನು ಮಗಳೆಂದು ತಿಳಿದು, ಅದರಂತೆ ವರ್ತನವಿಡದಿದ್ದರೆ, ಖಡ್ಗಪಾಣಿಯಾಗಿ ಸಮರಕ್ಕೆ ಬರಬೇಕೆಂಬ ಉದ್ದೇಶದಿಂದ ಪತ್ರದ ಉತ್ತರವೆಂದು ಈ ಖಡ್ಗವನ್ನು ಕಳಿಸಿದೆ, ಎಂದು ಅವನು ತಿಳಿಸಿರುವನು."

"ಏನೂ ಅಡ್ಡಿಯಿಲ್ಲ. ಕನಕಲತೆಯನ್ನು ತೆಗೆದುಕೊಂಡು ಬರಲಿಕ್ಕೆ ನಾನು ಸಮರ್ಥನಿರುವೆನು. ವಜೀರ, ಆಹೋರ ದುರ್ಗವು ಒಳ್ಳೆಯ ದುರ್ಗಮುವಾಗಿದೆ. ಅದಕ್ಕಾಗಿ ಕಾರ್ಯವು ದಿನವಧಿಯಿಂದ ನೆರವೇರಬಹುದು.'

ಅಹಮ್ಮದಶಹನು ಹೀಗೆ ನುಡಿದ ಕೂಡಲೆ, ವಜೀರನು--"ಖಾವಿಂದ, ಪರ್ವತಸಿಂಹನೆಂದರೆ ಅವನೇನು ದೊಡ್ಡ ಮಂಡಲೇಶ್ವರನಲ್ಲ; ಸಾಮರ್ಥ್ಯಶೀಲನಲ್ಲ. ವಿನಾಶಕಾಲಕ್ಕೆ ವಿಪರೀತ ಬುದ್ಧಿಯು ಹುಟ್ಟುವುದು ಸ್ವಾಭಾವಿಕವು. ಅವನು ಅಪ್ರಬುದ್ಧತನ ಮಾಡಿದನೆಂದು ನೀವೂ ಮಾಡಬಾರದು. ಕನಕಲತೆಯಂಥ ಸ್ತ್ರೀಯರು ಹಿಂದುಗಳಲ್ಲಿ ಅಸಂಖ್ಯಾಕರಿರುವರು. ಸುಲಭವಾಗಿ ಕೈವಶವಾಗುವಂಥ ಸ್ಥಳವನ್ನು ಶೋಧಿಸಿದರಾಯಿತು. ಒಬ್ಬ ಸ್ತ್ರೀಗಾಗಿ ರಕ್ತದ ಕಾಲುವೆಗಳನ್ನು ಏಕೆ ಹರಿಸಬೇಕು?"

"ನೀವು ಒಳ್ಳೆಯ ಮಂತ್ರಾಲೋಚಕರಿರುವಿರಿ!" ಶಹನು ತಿರಸ್ಕಾರದಿಂದ ವಜೀರನಿಗೆ ನುಡಿದು—"ಕನಕಲತೆಯಂಥ ರತ್ನವು ಬೇರೆ ಕಡೆಯಲ್ಲಿಲ್ಲ. ನನ್ನ ಪತ್ರಕ್ಕೆ ಉತ್ತರವೆಂದು ಕಳುಹಿಸಿದ ಮದಾಂಧನನ್ನು ಉಪೇಕ್ಷಿಸಿದರೆ, ರಾಜ್ಯಭ್ರಷ್ಟತೆಯುಂಟಾದೀತು."

ನಿಜಾಮುದ್ದೌಲನು ಸ್ತಬ್ಧನಾದನು. ಅನಂತರದಲ್ಲಿ ಶಹನು ರೋಷನಖಾನನನ್ನು ಕುರಿತು—"ನಿಮಗೆ ಉಪಸೇನಾಧಿಪತ್ಯವನ್ನು ಕೊಟ್ಟಿರುವೆನು. ಕನಿಷ್ಠಕ್ಕೆ ೨೦ ಸಾವಿರ ಸೈನಿಕರನ್ನಾದರೂ ಆಹೋರಕ್ಕೆ ಒಯ್ಯಲಿಕ್ಕೆ ಬೇಕು."

ಅನಂತರದಲ್ಲಿ ಬಾದಶಹನು ನಿಜಾಮುದ್ದೌಲನಿಗೂ ರೋಷನಖಾನನಿಗೂ ನಿರೋಪಕೊಟ್ಟು, ಅನೇಕ ವಿಧದ ವಿಚಾರಗಳಲ್ಲಿ ನಿಮಗ್ನನಾದನು. ನಿರಾಶೆ-ಅಪಮಾನ, ಸಂತಾಪ ಮೊದಲಾದ ವಿಕಾರಗಳಿಂದ ಅವನ ಹೃದಯದಲ್ಲಿ ಕೋಲಾಹಲವೆದ್ದಿತ್ತು. ತಾನು ಬರೆದ ಪತ್ರಕ್ಕೆ ಕನಕಲತೆಯು ಬರುವುದಕ್ಕೆ ಪ್ರತಿಯಾಗಿ ಖಡ್ಗವು ಬಂದದ್ದರಿಂದ, ಅವನ ಎದೆಗೆ ಕಲ್ಲು ಬಡಿದಂತಾಗಿ ಅವನು ಹತಾಶನಾಗಿ ಸುಮ್ಮನೆ ಬಿದ್ದುಕೊಂಡನು.

---

## ಪ್ರೇಮದ ಕಾಣಿಕೆ.

ಅಹೋರದುರ್ಗದಲ್ಲಿದ್ದ ರಾಜಪ್ರಸಾದದಲ್ಲಿಯ ಉಪವನದಲ್ಲಿ ಅಮಾತ್ಯಪುತ್ರಿಯಾದ ಮಂಜುಳೆಯು ಪುಷ್ಪಗಳನ್ನು ಕೊಯ್ಯುತ್ತಲಿದ್ದಳು. ಅವಳು ಪುಷ್ಪಗಳನ್ನು ಕೊಯ್ಯುತ್ತ ತನ್ನ ಮಂಜುಳವಾದ ವಾಣಿಯಿಂದ ಮೆಲ್ಲಮೆಲ್ಲನೆ ಹಾಡುತ್ತಲಿದ್ದಳು. "ನಾಮ ಮಧುರ! ರೂಪ ಮಧುರ! ಕಾರ್ಯ ಮಧುರ! ಹೃದಯ ಮಧುರ! ಸ್ನೇಹ ಮಧುರ! ಸಹವಾಸ ಮಧುರ । ಮಧುರ ಮಧುರಮಯನಿಹನು ||" ಎಂದು ಅವಳು ಅನ್ನುತ್ತಿರುವಾಗ ಒಬ್ಬ ನವಯುವಕನು ಹಿಂದೆ ಬಂದು ಅವಳ ಕಣ್ಣುಗಳನ್ನು ಮುಚ್ಚಿದನು.

"ಯಾರವರು?" ಮಂಜುಳೆಯು ವಿಸ್ಮಿತಳಾಗಿ ಕೇಳಿದಳು. ಉತ್ತರವಿಲ್ಲ.

"ಯಾರವರು ?" ಮತ್ತೂ ಉತ್ತರವಿಲ್ಲ.

"ಸಖಿ, ಪದ್ಮಿನಿ !" ಮಾತು ಹೊರಡಲಿಲ್ಲ.

"ಪ್ರಿಯ ಸಹಚರಿ, ಕನಕಲತೆ." ಮತ್ತೆಯೂ ಮಾತು ಹೊರಡಲಿಲ್ಲ.

"ಅಲ್ಲಲ್ಲ, ಇದು ಸ್ತ್ರೀಯರ ಮೃದು ಹಸ್ತವಲ್ಲ; ಮೃದು ಕಾರ್ಯವಲ್ಲ. ಪುರುಷರ ಪರುಷ ಹಸ್ತವು; ಪರುಷ ಕಾರ್ಯವು," ಎಂದು ಮಂಜುಳೆಯು ನುಡಿದು, ಕಣ್ಣು ಮುಚ್ಚಿದ ತರುಣನ ಕೈಗಳನ್ನು ಹಿಡಿದು, "ಯಾರವರು? ಮತ್ತಾರಿರಬೇಕು? ಪಾಷಾಣಹೃದಯದ ಮಧುರಸಿಂಹರೇ ಇವರು ! ಅಹುದಾದರೆ ಕಣ್ಣು ಬಿಡಬೇಕು."

ಆ ತರುಣನು ಮಂಜುಳೆಯ ಕಣ್ಣು ಬಿಟ್ಟು ದೂರ ಸರಿದು ನಿಂತನು. ಆಗ ಅವನು ಅವಳ ಮುಖವನ್ನು ನೋಡುತ್ತ ಗಹಗಹಿಸಿ ನಗತೊಡಗಿದ್ದನು. ಮಂಜುಳೆಯು ಕಣ್ಣುಗಳನ್ನು ದುಕೂಲದಿಂದ ತಿಕ್ಕಿಕೊಂಡು, ಸಿಟ್ಟಿನ ಆವಿರ್ಭಾವದಿಂದ— "ಇದೇನು ಮಧುರಸಿಂಹರೇ, ವಿನೋದವು ಮೇರೆದಪ್ಪಿತಲ್ಲ! ನಿಮ್ಮ ಈ ಕೃತ್ಯವನ್ನು ಕನಕಲತೆಯಾಗಲಿ, ಸತ್ಯೇಂದ್ರಸಿಂಹನಾಗಲಿ ನೋಡಿದ್ದರೆ ಹೇಗಾಗುತ್ತಿತ್ತು?"

"ಹೇಗಾಗುತ್ತಿತ್ತು, ಮಂಜುಳೆ ?" ಮಧುರಸಿಂಹನು ನಗುತ್ತಲೇ ಕೇಳಿದನು.

"ಏನಾಗುತ್ತಿತ್ತೆಂದರೆ, ಏನು ಹೇಳಲಿ? ಮನಸ್ಸಿನಲ್ಲಿ ಭಯ-ಸಂಕೋಚ ಭಾವಗಳಿದ್ದರೆ ಎಲ್ಲ ಸಂಗತಿಗಳೂ ಗೊತ್ತಾಗುವವು."

"ನನ್ನಲ್ಲಿ ಭಯ-ಸಂಕೋಚ ಭಾವನೆಯಿತ್ತು. ಮಂಜುಳೆ, ನಿನ್ನ ಪದ್ಯವೇ ನನ್ನ ಆ ಭಾವನೆಯನ್ನು ನಾಶಗೊಳಿಸಿತು."

ಮಂಜುಳೆಯು ಮೆಟ್ಟಿಬಿದ್ದಳು. ಅವಳು ಮುಖವನ್ನು ಕೆಳಗೆ ಮಾಡಿ, ಲಜ್ಜೆಯಿಂದ--"ನೀವು ಆ ಪದ್ಯವನ್ನು ಕೇಳಿದಿರೇನು?" ಎಂದು ನುಡಿದು, ಸಿಟ್ಟಿಗೆದ್ದವಳಂತೆ ನಟಿಸಿ—"ಸ್ತ್ರೀಯರು ಏಕಾಕಿಗಳಾಗಿ ಇದ್ದ ಸ್ಥಳದಲ್ಲಿ ಕಳ್ಳರಂತೆ ಬರುವ ಚಾಳಿಯನ್ನು ಎಂದಿನಿಂದ ಕಲಿತಿರಿ ಮಧುರಸಿಂಹರೆ?"

"ಪ್ರಿಯ ಮಂಜುಳೆ, ಮೊದಲು ಸದ್ವರ್ತನಿಯೆಂದು ನಾನು ಎಲ್ಲೆಡೆಯಲ್ಲಿ ಖ್ಯಾತಿಗೊಂಡಿದ್ದೆನು; ಆದರೆ ನಿನ್ನ ಸಹವಾಸ-ಪ್ರೇಮಗಳ ಬಳಿಕೆಯಾದಂದಿನಿಂದ ನೀನು

ಆಕ್ಷೇಪಿಸುತ್ತಿರುದ ಚಟಗಳೂ, ಚಾಳಿಗಳೂ ನನ್ನಲ್ಲಿ ನೆಲೆಗೊಂಡಿರುವವು.” ಎಂದು ಮಧುರಸಿಂಹನು ನುಡಿದು-“ಯಾಕೆ ಮಂಜುಳೆ, ನಾನು ಆ ಪದ್ಯವನ್ನು ಕೇಳಬಾರದಾಗಿತ್ತೇನು? ಹಾಗಾದರೆ ಹಾಡುವ ಮುಂಚಿತವಾಗಿ, ಯಾರೂ ಹಾಡು ಕೇಳಬಾರದೆಂಬ ಸೂಚನೆಯನ್ನು ಉದ್ಯಾನದ್ವಾರದಲ್ಲಿ ಬರೆದು ಹಚ್ಚಿದ್ದರೆ ಕಿವಿ ಮುಚ್ಚಿಕೊಂಡೇ ಒಳಗೆ ಪ್ರವೇಶಿಸುತ್ತಿದ್ದೆನು. ಇರಲಿ. ಮಂಜುಳೆ, ಇಷ್ಟು ದಿನಗಳಾದರೂ ಹೀಗೆ ಏಕಾಂತ ದರ್ಶನದ ಸುಯೋಗವು ಘಟಿಸಿದ್ದಿಲ್ಲ; ಇಂದು ಅದು ಸಹಜವಾಗಿ ಒದಗಿರುವದು. ನಿನ್ನ ಮನೋದಯವನ್ನು ಸ್ಪಷ್ಟವಾಗಿ ತಿಳಿಸಿಬಿಡು. ನನ್ನ ನಿನ್ನ ಪ್ರೇಮಳ ಸಖ್ಯವು ಘಟಿಸಿ ಎಷ್ಟೋ ದಿನಗಳು ಗತಿಸಿ ಹೋದವು. ಆದರೂ ನೀನು ನಿನ್ನ ಹೃದಯದಲ್ಲಿಯ ರಹಸ್ಯವನ್ನು ಬೈಲಿಗೆಳೆಯಲೊಲ್ಲೆ. ಪ್ರಿಯಕರ ಮಂಜುಳೆ, ನೀನು ನನ್ನನ್ನು ವರಿಸುವೆಯೋ-ಇಲ್ಲವೋ ಸ್ಪಷ್ಟವಾಗಿ ಹೇಳಿಬಿಡು.”

“ಪ್ರಿಯ ಮಧುರ, ನಾನು ವಿವಾಹವಾದರೆ ನಿಮ್ಮನ್ನೇ! ಇಲ್ಲವಾದರೆ ಹೀಗೆಯೇ ಇರುವೆನು. ನಿಮ್ಮ ಹೊರತು ಅನ್ಯ ಪುರುಷರು ನನಗೆ ಬಂಧುಸಮಾನರು. ಈಗಲಾದರೂ ಆಯಿತೋ-ಇಲ್ಲವೋ?”

“ಪ್ರಿಯೆ, ಈ ಬಗೆಯ ಮಾತುಗಳನ್ನು ನೀನು ಇಂದೇ ಹೊಸದಾಗಿ ಆಡಿಲ್ಲ. ಇಂಥ ಮಾತುಗಳಿಂದ ನನ್ನ ಮನಸ್ಸು ಸಮಾಧಾನಗೊಳ್ಳುವದಿಲ್ಲ. ನೀನು ನನ್ನಲ್ಲಿ ಪ್ರಣಯವುಳ್ಳವಳಾಗಿರುವೆಯೆಂಬದನ್ನು ನಾನು ಬಲ್ಲೆನು; ಆದರೆ ವಿವಾಹವಾಗದೆ ಹೀಗೆಯೇ ವ್ರತಾಚರಣೆ ಮಾಡುತ್ತಿದ್ದರೆ ಪ್ರಯೋಜನವೇನು?”

“ಮಧುರಸಿಂಹರೇ, ಅವಸರ ಮಾಡಬೇಡಿರಿ.”

“ಹಾಗಾದರೆ ನೀನು ನನ್ನನ್ನು ಎಂದು ವರಿಸುವೆಯೆಂಬದನ್ನಾದರೂ ನಿಶ್ಚಿತವಾಗಿ ಹೇಳಿ ಬಿಡು.”

“ಇಂದೇ ಹೇಳಲಾ ?” “ಹೌದು ; ಇಂದೇ ಹೇಳಬೇಕು.”

“ನಾಳೆ ಹೇಳಿದರೆ?” “ಅದಾಗದು.”

“ಪ್ರಿಯ ಮಧುರ, ಈಗ ನನಗೆ ಪೂಜೆಯ ವೇಳೆಯಾಗಿದೆ. ಮಾತನಾಡುತ್ತ ನಿಲ್ಲುವಂತಿಲ್ಲ. ನಿಮ್ಮ ಮಾತಿನ ಉತ್ತರವನ್ನು ನಾಳೆ ಹೇಳುವೆನು.”

“ಯಾವ ಪೂಜೆಯು, ಮಂಜುಳೆ ?

“ನಾನು ನಿತ್ಯದಲ್ಲಿಯೂ ಸಂಧ್ಯಾಸಮಯಕ್ಕೆ ಶೈಲಕುಮಾರಿ ಗಿರಿರಾಜನಂದಿನಿ ಅಷ್ಟಭುಜಧಾರಿಣಿ ದುರ್ಗಾಮಾತೆಯ ಪೂಜೆ ಮಾಡುತ್ತಲಿರುವೆನು.”

“ಹೀಗೇನು ?” ಎಂದು ಮಧುರಸಿಂಹನು ನುಡಿದು—“ಹಾಗಾದರೆ ಜೀಗನೆ ನನ್ನ ಮಾತಿಗೆ ಉತ್ತರಕೊಟ್ಟು, ತೆರಳು. ಒಂದು ನಿಮಿಷದಲ್ಲಿ ನನ್ನ ಮಾತಿನ ಉತ್ತರಕೊಡಲಿಕ್ಕೆ ಬರುವಂತಿದೆ.”

“ನಾಳೆ ಹೇಳುವೆನು” ಎಂದು ನಗುತ್ತ ನುಡಿದು ಮಂಜುಳೆಯು ಹೂವಿನ ಕರಂಡಕವನ್ನು ಕೈಯಲ್ಲಿ ತೆಗೆದುಕೊಂಡು ಹೊರಡಲುದ್ಯುಕ್ತಳಾದಳು. ಮಧುರ

ಸಿಂಹನು ಅಡ್ಡಬಂದು, ಅವಳ ಕೈಹಿಡಿದು—"ಈಗಲೇ ಹೇಳಬೇಕು. ನೀನು ಎಷ್ಟೋ ಸಾರೆ ಮೋಸಗೊಳಿಸಿರುವೆ. ನಿನ್ನ ನಿಜವಾದ ಮನೋದಯವನ್ನು ಬಿಚ್ಚಿಟ್ಟ ಹೊರತು ಮುಂದೆ ಹೆಜ್ಜೆಯಿಡಲಿಕ್ಕೆ ಬಲವಾದ ಅಡ್ಡಿಯಿದೆ."

"ಕೈ ಬಿಡಿರಿ." "ಬಿಡುವದಿಲ್ಲ."

"ಇದೊಳ್ಳೇ ಛಲನೆಯು." ನಗುತ್ತ ಮಂಜುಳೆಯು ನುಡಿದು—"ನಾಳೆ ನಿಶ್ಚಯವಾಗಿ ನಿಮ್ಮ ಮಾತಿಗೆ ಉತ್ತರ ಕೊಡುವೆನು."

"ನೀನು ವಚನ ಕೊಟ್ಟ ಹೊರತು ನಾನು ನಿನ್ನನ್ನು ನಿಶ್ಚಯವಾಗಿ ಬಿಡುವದಿಲ್ಲ. ನೀನು ಅನೇಕವೇಳೆ ಇದರಂತೆ ನುಡಿದು ನನ್ನನ್ನು ಮೋಸಗೊಳಿಸಿರುವೆ. ನನ್ನನ್ನು ವರಿಸುವದಕ್ಕೆ ನೀನು ಸಿದ್ಧಳಿರದಿದ್ದರೆ ಸ್ಪಷ್ಟವಾಗಿ ಹೇಳಿಬಿಡು. ಮಂಜುಳೆ, ವಿಚಾರ ಮಾಡಿ ಉತ್ತರ ಕೊಡು."

ಮಧುರಸಿಂಹನು ಹೀಗೆ ನುಡಿದು ಟೊಂಕದಲ್ಲಿದ್ದ ಖಡ್ಗವನ್ನು ಒರೆಯಿಂದ ಹಿರಿದು ನಿಂತನು. ಅವನು ಖಡ್ಗಪಾಣಿಯಾದದ್ದನ್ನು ನೋಡಿ ಮಂಜುಳೆಯು ಭಯ ವಿಸ್ಮಯಚಕಿತಳಾಗಿ:"ಇದೇನು ಮಧುರ! ಖಡ್ಗವನ್ನು ಹೊರಗೆ ತೆಗೆದಿರಿ? ನಿಮ್ಮನ್ನು ವಿವಾಹವಾಗಲಿಕ್ಕೆ ಅಸಮ್ಮತಿಯನ್ನು ವ್ಯಕ್ತಪಡಿಸಿದರೆ, ಪ್ರಾಣಹೀರುವ ಸಾಹಸ ನಡೆದಿರುವವೇನು?"

"ಹೌದು. ಪ್ರಾಣ ಹೀರುವ ಸಾಹಸವೇ ಇದು! ಆದರೆ ನಿನ್ನ ಪ್ರಾಣವನ್ನಲ್ಲ; ನನ್ನ ಪ್ರಾಣವನ್ನು!" "ಮಧುರಸಿಂಹ!—"

"ಏಕೆ ಮಂಜುಳೆ?" "ಇದೇನು ವಿಚಿತ್ರಕಾರ್ಯವು?"

"ವಿಚಿತ್ರಕಾರ್ಯವಲ್ಲ; ಆತ್ಮಘಾತದ ಕಾರ್ಯವು!"

"ಕತ್ತಿಯನ್ನು ಒರೆಗಾಣಿಸಿರಿ."

"ನೀನು ವಚನಕೊಟ್ಟ ಹೊರತು ಅದು ಒರೆಗಾಣುವದಿಲ್ಲ. ನೀನು ನನ್ನನ್ನು ವರಿಸದಿದ್ದರೆ, ವರಿಸುವ ಬಗ್ಗೆ ದೃಢವಾದ ವಚನವನ್ನು ಇಂದೇ ಕೊಡದಿದ್ದರೆ, ನಿನ್ನ ಸಮಕ್ಷದಲ್ಲಿ ಆತ್ಮತ್ಯಾಗ ಮಾಡುವೆನು. ಇದೇ ನನ್ನ ಪ್ರತಿಜ್ಞೆಯು!"

"ಪ್ರೇಮಭ್ರಮೆಯ ಅತಿರೇಕವಿದು!"

"ಮಂಜುಳೆ, ವೇಳೆಗಳೆಯಬೇಡ. ಉತ್ತರಕೊಡು."

"ಒಬ್ಬ ಯಃಕಶ್ಚಿತ ರಮಣಿಗಾಗಿ ಆತ್ಮತ್ಯಾಗವೆ?"

"ಹೌದು. ಆತ್ಮತ್ಯಾಗವು ನಿಜ; ಆದರೆ ರಮಣಿಯು ಯಃಕಶ್ಚಿತಳಲ್ಲ, ಸ್ವರ್ಗೀಯ ಲಲನೆಯು. ಅವಳ ಸಲುವಾಗಿಯೇ ಆತ್ಮಘಾತವು."

"ಸದ್ಯದ ಭೀಷಣ ಪ್ರಸಂಗದಲ್ಲಿ ನಿಮ್ಮಂತಹ ರಾಷ್ಟ್ರಭಕ್ತರು ಆತ್ಮನಾಶಮಾಡಿಕೊಂಡರೆ ಸ್ವದೇಶಕ್ಕೆ ಎಷ್ಟು ಹಾನಿ ತಟ್ಟುವದೆಂಬದನ್ನು ವಿಚಾರಿಸಿರುವಿರೇನು? ಬೇಗನೆ ಅಹಮ್ಮದಶಹನೊಡನೆ ಯುದ್ಧದ ಪ್ರಸಂಗವಿರುವದೆಂಬದನ್ನು ನೀವು ಮರೆತಿರುವಿರಾ?"

"ಎಲ್ಲವೂ ಗೊತ್ತಿದೆ. ರಾಷ್ಟ್ರಭಕ್ತನನ್ನು ಉಳಿಸುವದೂ ಕೊಲ್ಲುವದೂ ನಿನ್ನ ಕೈಯಲ್ಲಿದೆ. ನೀನು ನನ್ನನ್ನು ಎಂದು ವರಿಸುವೆಯೆಂಬದರ ಬಗ್ಗೆ ನಿಶ್ಚಿತವಾದ ವಚನವಿತ್ತರೆ, ದ್ವಿಗುಣಿತ ಶೌರ್ಯ-ಸಾಹಸಗಳನ್ನು ತೋರಿಸಿ ರಾಷ್ಟ್ರಕಾರ್ಯ ಸಾಧಿಸುವೆನು. ನೀನು ಹಾಗೆ ಮಾಡದೆ ಹೋದರೆ, ನಾನು ಆತ್ಮಘಾತ ಮಾಡಿಕೊಳ್ಳುವೆನು. ನನ್ನನ್ನು ನಾಶಗೊಳಿಸಿ, ದೇಶದ ಹಾನಿ ಮಾಡುವೆಯೋ? ಉಳಿಸಿ ಹಿತ ಮಾಡುವೆಯೋ?"

"ಪ್ರಿಯ ಮಧುರಸಿಂಹ, ನೀವು ಇಷ್ಟೇಕೆ ಆತುರಗೊಂಡಿರುವಿರಿ? ಏನೂ ಅಡ್ಡಿ ಇಲ್ಲ. ನಾನು ನಿಮ್ಮನ್ನೇ ವರಿಸುವೆನು. ಯಾವಾಗ ವರಿಸುವೆನೆಂಬದನ್ನು ಕೇಳುವದಕ್ಕಾಗಿ ನೀವು ಉತ್ಸಾಹಗೊಂಡಿರುವಿರಿ. ಸದ್ಯದ ಯುದ್ಧದ ಪ್ರಸಂಗದಲ್ಲಂತು ವಿವಾಹಕಾರ್ಯವನ್ನು ಈಡೇರಿಸುವದು ಸಾಧ್ಯವಲ್ಲ; ವಿಹಿತವೂ ಅಲ್ಲ. ಯುದ್ಧವು ಮುಗಿದೊಡನೆಯೇ ನಾನು ನಿಮ್ಮನ್ನು ವರಿಸುವೆನು; ಆದರೆ ನನ್ನದೊಂದು ಕಟ್ಟಳೆಯುಂಟು. ಆ ಕಟ್ಟಳೆಯಂತೆ ನಡೆದರೆ ಮಾತ್ರ ನಾನು ನಿಮ್ಮನ್ನು ವರಿಸುವವಳು."

"ಇಲ್ಲದಿದ್ದರೆ? ವಿಸ್ಮಿತನಾಗಿ ಮಧುರಸಿಂಹನು ಕೇಳಿದನು."

"ನಿಮ್ಮ ನಾಮಸಂಕೀರ್ತನೆ ಮಾಡುತ್ತ, ನಿಮ್ಮ ಮೂರ್ತಿಯನ್ನು ಪೂಜಿಸುತ್ತ ಆಜನ್ಮವಾಗಿ ಅವಿವಾಹಿತಳಾಗಿರುವೆನು." 'ಒಳ್ಳೇದು; ನಿನ್ನ ಕಟ್ಟಳೆಯೇನು?'

ಪಾಪಿಯಾದ ಅಹಮ್ಮದಶಹನ ಶಿರಸ್ಸನ್ನು ತಂದು ನನ್ನ ಸಮ್ಮುಖದಲ್ಲಿರಿಸಿದರೆ, ಅಂದೇ ನಾನು ನಿಮ್ಮನ್ನು ವರಿಸುವೆನು."

"ಇಷ್ಟೇಯೋ? ಈ ಕಾರ್ಯವು ಕಠಿಣವಾದದ್ದಾದರೂ, ದೀರ್ಘ ಸಾಹಸ ಮಾಡುವೆನು. ನಾನು ಅಹಮ್ಮದಶಹನ ಮಸ್ತಕವನ್ನು ತರುವೆನು; ಇಲ್ಲವೆ ನನ್ನ ಮಸ್ತಕವನ್ನು ರಣ ಭೂಮಿಗೆ ಚಲ್ಲುವೆನು."

"ವಿರೋಚಿತ ಭಾಷಣವಿದು. ಪ್ರಿಯರೇ, ನೀವು ಭಾವೀ ಯುದ್ಧದಲ್ಲಿ ವಿಜಯಿಗಳಾಗಬೇಕೆಂದು ಏಕಲಿಂಗಜಿಯನ್ನು ಅನನ್ಯ ಭಾವದಿಂದ ಪ್ರಾರ್ಥಿಸುತ್ತಲಿರುವೆನು."

"ವೀರ ಬಾಲೆ, ಮಂಜುಳೆ, ನಾನು ಇನ್ನು ಮೇಲೆ ನಿನ್ನನ್ನು ಕಾಣಬೇಕಾದರೆ ಅಹಮ್ಮದಶಹನ ಶಿರವನ್ನು ತೆಗೆದುಕೊಂಡೇ ಬರುವೆನು. ಅವನ ಶಿರವು ದೊರೆಯದಿದ್ದರೆ ಇದೇ ಕೊನೆಯ ದರ್ಶನವು. ನನಗೆ ನಿರೂಪವನ್ನು ಕೊಡು, ಪ್ರಿಯೆ!"

'ಹೋಗಿ ಬನ್ನಿರಿ ನಾಥರೆ! ನನ್ನ ಪ್ರೇಮದ ಕಾಣಿಕೆಯನ್ನು ಬೇಗನೆ ತನ್ನಿರಿ.'

ಮಧುರಸಿಂಹನು ತನ್ನ ಪ್ರಿಯಕರೆಯ ಮುಖವನ್ನು ಮೆಲ್ಲನೆ ಚುಂಬಿಸಿ, ವಿಷ್ಟ್ಯಗ್ರತಿಯಿಂದ ಉದ್ಯಾನವನ್ನು ಬಿಟ್ಟು ತೆರಳಿದನು. ಅನಂತರದಲ್ಲಿ ಸ್ವದೇಶಪ್ರೇಮಿ ವೀರ ಕುಮಾರಿಯಾದ ಮಂಜುಳೆಯು ರಾಜಕುಮಾರಿಯಾದ ಕನಕಲತೆಯ ಮಂದಿರಕ್ಕೆ ಹೊರಟಳು.

———

## ಅಘೋರ ಪ್ರತಿಜ್ಞೆ.

"ರೂಪವು ಸ್ತ್ರೀಗೆ ಶತ್ರುವು; ರೂಪವತಿ ಪತ್ನಿಯು ಪತಿಗೆ ಶತ್ರುವು!"

"ಮಂಜುಳೆ, ಈ ಹೊಸ ಸುಭಾಷಿತವನ್ನು ಯಾರಲ್ಲಿ ಅಭ್ಯಾಸಿಸಿದೆ?"

"ಇಂತಹ ಸುಭಾಷಿತಗಳಿಗೆ ಗುರುವು ಬೇಕಾಗುವದಿಲ್ಲ; ಕಾಲವೇ ಕಲಿಸುವದು. ಕಾಲಮಾನ ಪರಿಸ್ಥಿತಿಗನುಸಾರವಾಗಿ ಸುಭಾಷಿತದಲ್ಲಾದರೂ ಹೆಚ್ಚು ಕಡಿಮೆಯಾಗುವದು." ಎಂದು ಮಂಜುಳೆಯು ನಗುತ್ತ ಕನಕಲತೆಗೆ ಉತ್ತರ ಕೊಟ್ಟಳು.

"ನಾಮಾಂಕಿತ ಸುಭಾಷಿತಕಾರರು ತಲೆದೋರಿದ ಕಾಲದಲ್ಲಿ ನೀನಿಲ್ಲದಿದ್ದರೆ ಸುಭಾಷಿತ ಗ್ರಂಥದಲ್ಲಿ ಎಷ್ಟೋ ವಿಧದ ಕ್ರಾಂತಿಯನ್ನುಂಟು ಮಾಡುತ್ತಿದ್ದೆ." ಕನಕಲತೆಯು ನಗುತ್ತಲೇ ನುಡಿದಳು.

"ಹಾಗಲ್ಲ ದೇವಿ, ಸದ್ಯದ ಯವನರ ಹಾವಳಿಯ ಕಾಲದಲ್ಲಿ ರೂಪವತಿ ತರುಣಿಯರು ಹಿಂದುಗಳಲ್ಲಿ ಇರಬಾರದೆಂದು ಅನಿಸುವದು. ಯವನರ ಕಾಕದೃಷ್ಟಿಯ ಮೂಲಕ ಇಂಥ ಸುಭಾಷಿತಗಳನ್ನು ಆಯಾ ಕಾಲಕ್ಕೆ ಸರಿಯಾಗಿ ನಮ್ಮಂಥ ವೈಜ್ಞಾನಿಕರು ನಿರ್ಮಾಣ ಮಾಡುವರು."

"ನಿನ್ನಂಥ ವೈಜ್ಞಾನಿಕರೇ? ನೀನೊಳ್ಳೇ ಪಂಡಿತೆಯೇನು?"

"ಹಾಗಲ್ಲದಿದ್ದರೆ ನಾನು ಹೊಸ ಸುಭಾಷಿತವನ್ನು ಹೇಗೆ ನಿರ್ಮಾಣ ಮಾಡುತ್ತಿದ್ದೆನು?"

ಆಹೋರ ದುರ್ಗದಲ್ಲಿಯ ಅಟ್ಟಾಲಿಕೆಯಲ್ಲಿ ಕನಕಸುಂದರಿಯೂ ಅವಳ ಸಖಿಯಾದ ಮಂಜುಳೆಯೂ ಮಾತಾಡುತ್ತ ಕುಳಿತಿದ್ದರು. ಕನಕಲತೆಯು ಒಂದು ನಿಲುವು ಕನ್ನಡಿಯನ್ನು ಎದುರಿಗಿಟ್ಟುಕೊಂಡು ವಿವಿಧ ರತ್ನಾಭರಣಗಳನ್ನು ಧರಿಸಹತ್ತಿದ್ದಳು. ಸುಭಾಷಿತವಾದ ಅವಳ ಲಾವಣ್ಯಮಯಿ ಹೇಮಲತೆಯನ್ನು ನೋಡಿ ಮಂಜುಳೆಯು ವಿನೋದಕ್ಕಾಗಿ ಸತ್ಯಾತ್ಮಕ ವಸ್ತುಸ್ಥಿತಿಯನ್ನು ಸೂಚಿಸುವ ಕಾಲ್ಪನಿಕ ಸುಭಾಷಿತದ ಒಂದು ಚರಣವನ್ನು ಅಂದಳು.

"ಮಂಜುಳೆ, ರೂಪವತಿ ಪತ್ನಿಯು ಪತಿಗೆ ಶತ್ರುವೆಂಬದು ಸದ್ಯದ ಕಾಲದಲ್ಲಿ ನಿಜವಷ್ಟೆ?" "ಸೂರ್ಯಪ್ರಕಾಶದಷ್ಟು ನಿಚ್ಚಳವು ನಿಜವು."

"ಹಾಗಾದರೆ ಮಧುರಸಿಂಹರಿಗೆ ಈ ವಿಷಯವನ್ನು ತಿಳಿಸುವೆನು."

"ರಾಜಕುಮಾರಿ!" 'ಯಾಕೆ ಅಮಾತ್ಯಪುತ್ರಿ?'

"ನನಗೆ ರೂಪವತಿಯೆಂದು ಯಾರು ಅನ್ನುವರು?"

"ನಿನ್ನ ಹೃದಯಚೋರರಾದ ಮಧುರಸಿಂಹರು."

"ರೂಪಾಂಧರ ಸಾಕ್ಷಿಯು ನನಗೆ ಬೇಕಾಗಿಲ್ಲ."

"ಅವರಿಗೆ ಅಂಧತ್ವ ಬರಲಿಕ್ಕೆ ರೂಪವೇ ಕಾರಣವಾಗಿರುವದೆಂದ ಬಳಿಕ, ಬೇರೆ ಸಾಕ್ಷಿಗಳ ಆವಶ್ಯಕತೆಯಿಲ್ಲ. ನಿನ್ನ ವಾಣಿಯೇ ನಿನ್ನ ರೂಪಕ್ಕೆ ಸಾಕ್ಷಿಯಾಗಿ ಹೋಯಿತು."

“ವಾಕ್ಚತುರರಾದ ನಿಮ್ಮೊಡನೆ ಮಾತನಾಡಿ ಗೆಲ್ಲಲಾರೆನು; ಆದರೆ ದೇವಿ, ಸ್ವರ್ಗೀಯ ಅಪ್ಸರೆಯರನ್ನು ನಿವಾಳಿಸಿ ಚಲ್ಲುವಂತಹ ನಿನ್ನ ರೂಪದ ಮುಂದೆ ನನ್ನ ರೂಪವು ಸೂರ್ಯನ ಮುಂದಿನ ಹೊನ್ನೀ ಹುಳವೇ ಸರಿ. ಅಂತೆಯೇ ಹೆಸರು ಹೊಂದಿದ ಶಾಹೀರರು ನಿನ್ನ ಸೌಂದರ್ಯ ವರ್ಣನಾಪರವಾದ ಪದ್ಯಗಳನ್ನು ರಚಿಸಿ, ಯವನ ನರಪಶುಗಳೆದುರಿಗೆ ಹಾಡಿ, ಸಂಭಾವನೆ ಹೊಂದುತ್ತಿರುವರು.”

‘ಹೀಗೇನು?’ ಕನಕಲತೆಯು ಭಯವಿಹ್ವಲಳಾಗಿ ಕೇಳಿದಳು.

“ನಿಜವು ದೇವೀ. ಅಂತೆಯೇ ನಾನು ಹೊಸ ಸುಭಾಷಿತವನ್ನು ನಿರ್ಮಾಣ ಮಾಡಿದೆನು. ಯವನರ ಪತಿಗಳಲ್ಲಿ ಬಹು ಜನರು ವಿಷಯಲೋಲುಪರೂ ಪಾತಕೀ ಹೃದಯಿಗಳೂ ಆಗಿರುವರು. ಒಂದು ವೇಳೆ ಅಂಥವರ ವಕ್ರದೃಷ್ಟಿಯು ಬಿದ್ದರೆ, ಎಂಥ ಅನರ್ಥವಾಗುವದು ನೋಡು.”

“ಮಂಜುಳೆ, ಇಲ್ಲದ ಸಲ್ಲದ ಯೋಚನೆಗಳನ್ನು ಮನಸ್ಸಿನಲ್ಲಿ ತರುವದೇಕೆ? ಒಂದು ವೇಳೆ ಅಂಥ ಆಪತ್ತು ಒದಗಿದರೆ, ಕ್ಷತ್ರಿಯ ಲಲನೆಯರು ತಮ್ಮ ಶೀಲವನ್ನು ರಕ್ಷಿಸಿಕೊಳ್ಳಲಿಕ್ಕೆ ಅಸಮರ್ಥರಿರುವರೇನು?”

ಅಹಮ್ಮದಶಹನ ಪಾತಕೀ ಪ್ರಕರಣದ ಸುದ್ದಿಯು ಇನ್ನೂ ಕನಕಲತೆಗೆ ಗೊತ್ತಾಗದ್ದನ್ನು ನೋಡಿ ಮಂಜುಳೆಯು ಬೆರಗಾದಳು. ಕೋಮಲ ಹೃದಯಿಯಾದ ಇವಳು ನೊಂದುಕೊಂಡಾಳೆಂಬ ಭಯದಿಂದ ಆ ಸುದ್ದಿಯನ್ನು ಪರ್ವತಸಿಂಹನು ಬುದ್ಧಿಪೂರ್ವಕವಾಗಿ ಇವಳ ಮುಟ್ಟಿಗೆ ಗುಪ್ತವಾಗಿರಿಸಿರುವನೆಂದು ಅವಳು ಬಗೆದಳು. ಆಗ ಅವಳು—“ಕನಕಲತೆ, ಶೀಲವನ್ನು ರಕ್ಷಿಸಿಕೊಳ್ಳಬಹುದು; ಪಾತಕಿಯನ್ನು ಶಿಕ್ಷಿಸಬಹುದು. ಒಟ್ಟಿನ ಮೇಲೆ ರೂಪಮಹಿಮೆಯಿಂದಲೇ ಇಷ್ಟೆಲ್ಲ ಕೋಲಾಹಲ ವೇಳುವದಲ್ಲವೆ?” ಎಂದು ನುಡಿದು, ತಿರುಗಿ ನೋಡಿ—“ದೇವಿ, ಅಕೋ ನೋಡು, ಅಲ್ಲಿ ಸತ್ಯೇಂದ್ರಸಿಂಹರು ಬರುವಂತಿವೆ” ಎಂದು ನುಡಿದು ಎದ್ದು ನಿಂತಳು.

“ಬಂದರೇನಾಯಿತು ಮಂಜುಳೆ? ನನ್ನ ಅಣ್ಣನು ನಿನಗೂ ಅಣ್ಣನೇ. ಕುಳಿತುಕೊ.”

“ರಾಜಕುಮಾರೀ, ಅವರು ಯಾವದಾದರೊಂದು ವಿಷಯಕ್ಕಾಗಿ ಮಾತಾಡ ಲಿಕ್ಕೆ ಬರುತ್ತಿರಬಹುದು. ನನ್ನಿಂದ ಅವರಿಗೆ ವಿಘ್ನವಾಗಬಾರದು. ನನಗೂ ಕೆಲಸ ವಿದೆ. ಮತ್ತೆ ಬರುತ್ತೇನೆ.”

“ನಿನ್ನ ಕೆಲಸವೆ? ಅದು ನನಗೆ ಗೊತ್ತೇ ಇದೆ. ಹೋಗು, ಮಂಜುಳೆ, ಹೋಗು. ಮಧುರಸಿಂಹರು ನಿನ್ನ ದಾರೀ ನೋಡುತ್ತಿರಬಹುದು. ನಿನ್ನ ಕೆಲಸವು ಅವರ ಕಡೆಗೇ ಇರುವದಲ್ಲವೇ?”

“ರಾಜಕುಮಾರಿ, ನೀವು ಹೀಗೆಯೆ ವಿನೋದ ಮಾಡುತ್ತ ನನ್ನ ಜೀವ ತೆಗೆ ಯುವಿರಿ. ಆ ಮಧುರಸಿಂಹರು ಯಾವ ಮುಹೂರ್ತದಲ್ಲಿ ನನ್ನೊಡನೆ ಸಖ್ಯ ಬಳೆಯಿ ಸಿದರೋ ಕಾಣೆನು.”

"ಅಮೃತಸಿದ್ಧಿಯೋಗವನ್ನೇ ನೋಡಿ, ನಿನ್ನೊಡನೆ ಸ್ನೇಹ ಬೆಳೆಯಿಸಿರ ಬಹುದು. ಅಂತೆಯೆ ಅವರಿಗೆ ನಿನ್ನ ಅಧರಾಮೃತ ಪಾನ ಮಾಡುವ ಸುಯೋಗವು ನಿತ್ಯದಲ್ಲಿಯೂ ದೊರೆಯುತ್ತಲಿದೆ."

"ಛೀ! ಇದೇನು ಹುಚ್ಚಾಟ! ರಾಜಕುಮಾರಿ, ಇನ್ನೊಮ್ಮೆ ನಿನ್ನ ಬಳಿಗೆ ಬರ ಬೇಕೋ-ಬೇಡವೋ?"

"ಒಟ್ಟಿನ ಮೇಲೆ ಇಲ್ಲಿಗೆ ಬಾರದಂತೆ ಮಾಡಿಕೊಂಡು ಎಲ್ಲ ವೇಳೆಯನ್ನು ಮಧುರಸಿಂಹನಲ್ಲಿಯೇ ಕಳೆಯುವ ಅಭಿನವ ಕಾರಸ್ಥಾನವನ್ನು ಹೂಡಿದೆ." ಎಂದು ಕನಕಲತೆಯು ನಗುತ್ತ ನುಡಿದಳು."

"ಸದ್ಯಕ್ಕಂತೂ ನಾನು ಮಧುರಸಿಂಹರನ್ನು ಕಾಣುವದಿಲ್ಲ; ಅವರಾದರೂ ನನ್ನನ್ನು ಕಾಣುವದಿಲ್ಲ. ಸುಮ್ಮನೆ ಇಲ್ಲದ ಚೇಷ್ಟೆ ಮಾಡುವೆಯೇಕೆ?"

"ಯಾಕೆ, ಪರಸ್ಪರರು ಪ್ರಣಯ ಕಲಹ ಮಾಡಿರುವಿರೇನು? ಅಂತೆಯೆ ಕೆಲವು ನಿಮಿಷಗಳ ಮಟ್ಟಿಗೋ, ಕೆಲವು ಗಳಿಗೆಗಳ ಮಟ್ಟಿಗೋ ಒಬ್ಬರೊಬ್ಬರನ್ನು ಕಾಣ ಬಾರದೆಂದು ಹೇಗಾದರೂ ಮಾಡಿ ಮನಸ್ಸು ದೃಢಪಡಿಸಿರಬಹುದು."

"ರಾಜಕುಮಾರಿ, ಸಮಯ ದೊರೆತಾಗ ನಿನಗೆ ಎಲ್ಲ ಸಂಗತಿ ತಿಳಿಸುವೆನು. ಈಗಏನು ಹೇಳಿದರೂ ನಿನಗೆ ವಿನೋದವೇ ಆಗುವದು." ಎಂದು ನುಡಿದು, ಮಂಜುಳೆಯು ಅಲ್ಲಿಂದ ತೆರಳಿದಳು. ಮಂಜುಳೆಯು ಹೋದ ಒಂದೆರಡು ನಿಮಿಷಗಳಲ್ಲೇ ಸಂತ್ಯೇಂದ್ರಸಿಂಹನು ಅಲ್ಲಿಗೆ ಬಂದನು.

ಕನಕಲತೆಯು ಸತ್ಯೇಂದ್ರಸಿಂಹನು ಬಂದ ಕೂಡಲೆ, ಅವನ ಕೈ ಹಿಡಿದು— "ಅಣ್ಣಾ, ರಾಜಕಾರಣದಲ್ಲಿ ತೊಡಗಿದ ನಿನಗೆ ನನ್ನನ್ನು ಕಂಡು ಎರಡು ಮಾತಾಡಿ ಹೋಗಲಿಕ್ಕೆ ಅವಕಾಶವು ದೊರೆಯುತ್ತಿರಲಿಕ್ಕಿಲ್ಲವಷ್ಟೆ?"

"ತಂಗಿ, ನಿಜವಾಗಿಯೂ ಅವಕಾಶ ದೊರೆತಿಲ್ಲ. ರಾಜಕಾರಣವೆಂದರೆ ಮುಳ್ಳ ಹಾಸಿಗೆಯು!"

"ಅಪ್ಪನು ಎಲ್ಲ ಕಾರ್ಯಗಳನ್ನು ನೋಡಿಕೊಂಡು ಹೋಗುವಾಗ ನೀನು ಹೀಗೆ ಅನ್ನುವೆ. ಮುಂದೆ ರಾಜ್ಯಭಾರವನ್ನು ನೀನೇ ಸಂಪೂರ್ಣವಾಗಿ ವಹಿಸಿದ ಮೇಲೆ ಹೇಗೆ ಮಾಡುವೆ?"

"ತಂಗೀ, ಕಾರ್ಯ ಮಾಡುತ್ತ ಹೋದಹಾಗೆ ಕಾರ್ಯಕ್ಷಮತೆಯು ತನ್ನಿಂದ ತಾನೇ ನೆಲೆಗೊಳ್ಳುತ್ತ ಹೋಗುವದು."

"ಈಗ ಹೊಸದಾಗಿ ಯುದ್ಧದ ಗೊಂದಲವು ಉಪಸ್ಥಿತವಾದ್ದರಿಂದ ನಿನಗೆ ಇಲ್ಲಿಗೆ ಬರಲಿಕ್ಕೆ ಅನುವು ದೊರೆಯದಂತಾಗಿರಬಹುದು." 'ನಿನ್ನ ಮಾತು ನಿಜವು.'

"ಅಣ್ಣಾ, ಸಿಂಧದ ಬಾದಶಹನಾದ ಅಹಮ್ಮದಶಹನು ನಮ್ಮ ಮೇಲೆ ದಂಡೆತ್ತಿ ಬರುವ ಕಾರಣವೇನು?"

"ತಂಗೀ, ಕನಕಲತೆ, ಉಪ್ಪಾಮರಾದ ಯವನ ರಾಜರು ಸುಮ್ಮನೆ ಎಲ್ಲಿ ಕುಳಿತು

ಕೊಳ್ಳುವರು? ಯಾವಾಗಲೂ ಏನಾದರೊಂದು ಹಾವಳಿಯನ್ನೆಬ್ಬಿಸುವದೇ ಅವರ ಸ್ವಭಾವ ಧರ್ಮವು.'' ಎಂದು ಸತ್ಯೇಂದ್ರಸಿಂಹನು ನುಡಿದು, ನಿಟ್ಟುಸಿರ್ಗರೆದನು.

''ಅಣ್ಣಾ,'' ''ಯಾಕೆ ತಂಗೀ,''

''ಯುದ್ಧವ್ಯಾಪಾರದ ವಿಷಯವಾಗಿ ಕ್ಷತ್ರಿಯರ ಮನಸ್ಸು ಉದಾಸವಾಗಬೇಕೆ?''

''ಯುದ್ಧವ್ಯಾಪಾರಕ್ಕಾಗಿ ಔದಾಸೀನ್ಯ ಹೊಂದಿಲ್ಲ ತಂಗೀ!''

''ಮತ್ತೆ ಏತಕ್ಕಾಗಿ ಮನಸ್ಸು ಉದ್ವಿಗ್ನವಾಗಿದೆ? ನಿಟ್ಟುಸಿರ್ಗರೆದ ಉದ್ದೇಶವೇನು? ಅಣ್ಣಾ, ನೀನು ಈಗ ವಿಚಾರಸಾಗರದಲ್ಲಿ ಮುಳುಗಿದಂತಿದೆ. ಮುಖದ ಮೇಲೆ ವೀರಶ್ರೀಯ ಪ್ರಕಾಶವಿಲ್ಲ; ಸ್ವಾಭಾವಿಕವಾಗಿದ್ದ ತೇಜಸ್ವಿತೆಯಿಲ್ಲ. ಇದೇನು ವಿಚಿತ್ರವು? ನಿನ್ನ ಮನಸ್ಸು ಉದಾಸವಾಗಬೇಕಾದರೆ ಏನಾದರೂ ಅಂತಹ ಪ್ರಸಂಗವು ಘಟಿಸಿರಲಿಕ್ಕೆ ಬೇಕು?''

''ಏನೋ ಸುಮ್ಮನೆ ವಿಚಾರಿಸುತಲಿದ್ದೆನು. ಯಾಕೋ ಮನಸ್ಸು ಶಾಂತವಿಲ್ಲ. ಕಾರಣವನ್ನು ಹೇಳಲಾಗಲೊಲ್ಲದು.''

''ಕಾರಣವು ಗೊತ್ತಿಲ್ಲವೆ? ಅಥವಾ ಗೊತ್ತಿದ್ದರೂ ಹೇಳಲಿಕ್ಕೆ ಆಗಲೊಲ್ಲದೆ?''

ಪರಕ್ಷಣದಲ್ಲಿ ವೀರ ಸತ್ಯೇಂದ್ರನ ಕಣ್ಣುಗಳು ಕಿಡಿಯನ್ನು ಕಾರುತ್ತಿರುವಂತೆ ತೋರಹತ್ತಿದವು. ಮುಖವು ಕ್ರೋಧಲಕ್ಷಣಗಳಿಂದ ಭಯಂಕರವಾಯಿತು. ಈ ಅಭ್ಯಂತರ ದೃಶ್ಯವನ್ನು ನೋಡಿ ಕನಕಲತೆಯು ಬೆರಗಾದಳು. ಒಂದು ಕ್ಷಣದಲ್ಲಿ ದುಃಖ-ಔದಾಸೀನ್ಯ, ಮತ್ತೊಂದು ಕ್ಷಣದಲ್ಲಿ ಕ್ರೋಧ-ಸಂತಾಪ. ಅಣ್ಣನ ಹೃದಯವು ಹೀಗೆ ವಿಲಕ್ಷಣ ಭಾವವನ್ನು ಏಕೆ ತಳೆದಿರಬಹುದೆಂದು ಅವಳು ಬಹು ಪರಿಯಾಗಿ ವಿಚಾರಿಸಿದಳು. ನಿಜಸ್ಥಿತಿಯ ಗಂಧವಾರ್ತೆಯನ್ನರಿಯದ ಅವಳಿಗೆ ಆ ತೊಡಕಿನ ಪರಿಷ್ಕಾರವಾಗಲಿಲ್ಲ. ಆಗ ಅವಳು:—''ಪ್ರಿಯಬಂಧು, ನಿನ್ನ ವೀರ ಹೃದಯದಲ್ಲಿ ಶೋಕ-ಸಂತಾಪಗಳು ಉತ್ಪನ್ನವಾದದ್ದರ ರಹಸ್ಯವೇನು?''

''ಪ್ರಿಯ ಭಗಿನಿ, ನೀನು ಎಷ್ಟು ವಿಚಾರಿಸಿದರೂ, ನನ್ನ ಹೃದಯ ರಹಸ್ಯವನ್ನು ಬೈಲಿಗೆಳೆಯಲಾರೆನು. ಅದನ್ನು ಬೈಲಿಗೆಳೆಯುವದಕ್ಕೆ ತಂದೆಯವರ ಅಡ್ಡಿಯುಂಟು. ನನ್ನ ಮನಸ್ಸಿನ ಕ್ರೋಧ-ಸಂತಾಪಗಳ ಕಾರಣವನ್ನು ಬಚ್ಚಿಟ್ಟ ಬಗ್ಗೆ ನೀನು ನನ್ನನ್ನು ಕ್ಷಮಿಸು.''

''ಅಣ್ಣಾ, ಈ ನಿನ್ನ ಪ್ರೀತಿಯ ಭಗಿನಿಯ ಮುಂದೆ ಮುಚ್ಚುಮರೆಯೇ? ಇಂಥ ನಡತೆಯನ್ನು ಎಂದಿನಿಂದ ಕಲಿತೆ?''

''ತಂಗೀ, ಆ ಸಮಾಚಾರವೇ ಅಂತಹ ಆಪತ್ಪೂರ್ಣವೂ ಭಯಾನಕವೂ ಇರುವದು. ಅದನ್ನು ಕೇಳಿದರೆ ನಿನ್ನ ಕೋಮಲ ಹೃದಯವು ನೊಂದುಕೊಳ್ಳಬಹುದು; ಭಯಕಾತರತೆ ಹೊಂದಬಹುದು.''

''ಅಣ್ಣಾ, ಈ ಕನಕಲತೆಯಲ್ಲಿ ಎಂತಹ ಭಯಂಕರ ಸಮಾಚಾರವನ್ನು ಕೇಳಲಿಕ್ಕೂ, ಆಪತ್ಪೂರ್ಣ ಪ್ರಸಂಗವನ್ನು ಕಾಣಲಿಕ್ಕೂ ಸಾಮರ್ಥ್ಯವುಂಟು; ಸಹನ

ಶೀಲತೆಯುಂಟು. ಅನುಮಾನಿಸದೆ ಹೇಳು. ಈ ನಿನ್ನ ತಂಗಿಯು ಅಳ್ಳಿದೆಯವಳೂ ಸಾಹಸಹೀನಳೂ ಎಂದು ತಿಳಿದಿರುವೆಯೇನು? ನಾನು ವೀರ ಕುಮಾರಿಯಿರುವೆನು; ವೀರವರಾಂಗನೆಯಿರುವೆನು; ವೀರಕ್ಷಾತ್ರಾಣಿಯಿರುವೆನು! ನೀನು ಆ ರಹಸ್ಯಪೂರ್ಣ ಸಮಾಚಾರವನ್ನು ಹೇಳಲಿಕ್ಕೇ ಬೇಕು.''

ಸತ್ಯೇಂದ್ರಸಿಂಹನು ನಿರುಪಾಯನಾಗಿ, ಅಹಮ್ಮದಶಹನು ದಂಡೆತ್ತಿ ಬರುವ ಕಾರಣವನ್ನು ತಿಳಿಸಿದನು. ಅವನ ಮಾತುಗಳನ್ನು ಕೇಳಿ ಕನಕಲತೆಯು ತಿಲಾಂಶವಾದರೂ ಭಯಗೊಳ್ಳಲಿಲ್ಲ. ಅವಳು ನಿರ್ಭಯವಾಣಿಯಿಂದ:—"ಛೀ! ಇಷ್ಟಕ್ಕಾಗಿ ಚಿಂತೆಮಾಡುವದು ಎಲ್ಲಿಯ ರೀತಿಯು? ಅಷ್ಟು ಭಯವಾಗುತ್ತಿದ್ದರೆ, ಒಂದೆರಡು ನಿಮಿಷಗಳಲ್ಲಿ ಭಯದ ಸಮುಸ್ಯೆಯನ್ನು ದೂರಮಾಡಿ ಬಿಡಬಹುದು. ಬಂಧು, ಈ ಕನಕಲತೆಯು ನಿನ್ನೆದುರಿಗೆ ನಿಂತಿರುವಳು; ಒರೆಯೊಳಗಿನ ಕತ್ತಿಯನ್ನು ಹಿರಿದು ಒಂದೇ ಹೊಡತಕ್ಕೆ ಕೆಲಸ ಬಗೆಹರಿಸಿ ಬಿಡು. ಇಷ್ಟಾಗಿ ಬಿಟ್ಟರೆ, ಸದ್ಯಕ್ಕೆ ನಡೆದ ಎಲ್ಲ ಗೊಂದಲವೂ ಸದ್ದಾಗಿ ಹೋಗುವದು."

"ಇಂತಹ ಅಭದ್ರವಾದ ಮಾತುಗಳನ್ನು ಆಡಬೇಡ, ಕನಕಲತೆ'' ಸತ್ಯೇಂದ್ರನು ಸಿಟ್ಟಿನಿಂದ ನುಡಿದು:—"ಈ ನನ್ನ ಖಡ್ಗವು ಪ್ರಿಯಭಗಿನಿಯ ಕೊರಳು ಕೊಯ್ಯಲಿಕ್ಕೆ ಅವತಾರ ಹೊಂದಿಲ್ಲ; ಅದು ಪಾತಕಿಯಾದ ಅಹಮ್ಮದಶಹನ ಶಿರವನ್ನು ಹರಿಯುವದಕ್ಕೆ ಹುಟ್ಟಿದೆ.''

"ಅಣ್ಣಾ, ನೀನು ಸಮರ್ಥನಿರುವೆ; ಆದರೆ ನನ್ನ ಸಲುವಾಗಿ ಹೋಡೀ ರಾಜ್ಯದ ಮೇಲೆ ಗಂಡಾಂತರವು ಪ್ರಾಪ್ತವಾಗುವದು. ಅಹಮ್ಮದಶಹನು ಬಲಾಢ್ಯನು; ಯಾಕಂದರೆ, ಅವನಲ್ಲಿ ಬಹು ಸಂಖ್ಯಾಕ ಸೇನೆಯಿದೆ. ಹೋಡೀ ರಾಜ್ಯವು ಸಣ್ಣದು. ಇಲ್ಲಿಯ ರಜಪೂತ ವೀರರಾದ ನೀವು ಎಷ್ಟೇ ಶೂರರಿದ್ದರೂ ಅಲ್ಪ ಸಂಖ್ಯಾಕರಿರುವಿರಿ. ಅಂತಃಕಲಹ, ಸ್ವದೇಶಾಭಿಮಾನ ಶೂನ್ಯತೆಗಳಿಂದ ಯುಕ್ತವಾದ ಏತದ್ದೇಶೀಯ ರಾಜಗಣವು ನಿಮಗೆ ಸಹಾಯ ಮಾಡಲಾರದು. ಅದಕ್ಕಾಗಿಯೇ ನಾನು ಹೇಳುವದೇನಂದರೆ, ನನ್ನನ್ನು ಕಡಿದು ಚೆಲ್ಲಿ ಮುಂದೊದಗಬಹುವಾದ ಅನರ್ಥವನ್ನು ತಪ್ಪಿಸಿಬಿಡು.''

"ಸುಮ್ಮನಿರು, ಸುಮ್ಮನಿರು; ಇಂಥ ಅರುಚಿಕಾರಕ ಮಾತುಗಳನ್ನು ಕೇಳಲಾರೆನು, ಸುಮ್ಮನಿರು. ನೀನು ಹೀಗೆ ಮಾತಾಡತೊಡಗಿದರೆ ನಾನು ಈಗಲೇ ಹೊರಟು ಹೋಗುವೆನು."

ಸತ್ಯೇಂದ್ರಸಿಂಹನು ಕುಳಿತ ಸ್ಥಳದಿಂದೆದ್ದನು. ಕನಕಲತೆಯು ಅಡ್ಡಬಂದು:—"ಒಳ್ಳೇದು; ನಿನ್ನಂತೆಯೇ ಆಗಲಿ. ಅಣ್ಣಾ, ಕುಳಿತುಕೋ. ನಾನು ಮುಂದೆ ಇಂಥ ಮಾತುಗಳನ್ನಾಡುವದಿಲ್ಲ. ಈಗಾದರೂ ಆಯಿತೇ?''

ಸತ್ಯೇಂದ್ರಸಿಂಹನು ಕುಳಿತುಕೊಂಡನು. ಆಗ ಕನಕಲತೆಯು:—"ಅಹಮ್ಮದಶಹನು ದಂಡೆತ್ತಿ ಬಂದರೆ ಹೇಗೆ?''

"ಇದೇನು ಪ್ರಶ್ನೆ ಮಾಡುತ್ತಿರುವೆ? ಆಕ್ರಮಣಕ್ಕೆ ಪ್ರತ್ಯಾಕ್ರಮಣದ ಹೊರತು ಬೇರೆ ಉಪಾಯವೇನು? ಕ್ಷತ್ರಿಯರು ಧರ್ಮಶೀಲರಕ್ಷಣೆಗಾಗಿ ಪ್ರಾಣವನ್ನು ಕೊಡುವರೇ ಹೊರತು, ಎಂದೂ ಭ್ರಷ್ಟರಾಗಲಾರರೆಂಬದನ್ನು ನಿನಗೆ ಹೇಳಲಿಕ್ಕೆ ಬೇಕೆ?"

"ಅಣ್ಣಾ, ನನ್ನಿಂದ ತಪ್ಪುಕೆಲಸವಾಗುತ್ತಿತ್ತು." 'ಅದೇಕೆ ಕನಕಲತೆ?'

"ಆತ್ಮತ್ಯಾಗ ಮಾಡಿ ಭಾವೀ ಗಂಡಾಂತರವನ್ನು ದೂರ ಮಾಡಬೇಕೆಂಬ ವಿಚಾರವು ನನ್ನಲ್ಲಿ ಹುಟ್ಟಿತ್ತು; ಆದರೆ, ಹಾಗೆ ಮಾಡುವದು ಒಳಿತಲ್ಲವೆಂದು ವಿಚಾರಾಂತ್ಯದಲ್ಲಿ ತಿಳಿಯಿತು."

"ಯಾವ ವಿಚಾರ ಮಾಡಿರುವೆ?" ಉತ್ಕಂಠೆಯಿಂದ ಸತ್ಯೇಂದ್ರನು ಕೇಳಿದನು.

"ದುಷ್ಟ ಅಹಮ್ಮದಶಹನು ಒಂದು ವೇಳೆ ಹೋಡೀ ರಾಜ್ಯವನ್ನು ನಾಶಗೊಳಿಸಿ, ನಿನ್ನನ್ನೂ ತಂದೆಯವರನ್ನೂ ಕೊಂದರೆ, ನಾನು ಮಾತ್ರ ಸಾಯುವದಿಲ್ಲ."

"ಇದೇನು ಮಾತಾಡುವೆ? ಕನಕಲತೆ, ನಿನ್ನ ಮಾತಿನ ಅರ್ಥವಾಗಲೊಲ್ಲದು. ಚನ್ನಾಗಿ ಒಡೆದು ಹೇಳು. ನೀನು ಸಾಯುವದಿಲ್ಲವೇ?"

"ನಾನು ಸಾಯುವೆನು; ಆದರೆ ನಿರರ್ಥಕವಾಗಿ ಸಾಯುವದಿಲ್ಲ."

"ಹೇಗೆ ಸಾಯುವೆ?"

"ವಿಲಕ್ಷಣವಾದ ರೀತಿಯಿಂದ ಸಾಯುವೆನು."

ಸತ್ಯೇಂದ್ರನು ನಕ್ಕು "ವಿಚಿತ್ರತರದ ಭಾಷಣವಿದು!"

ಕನಕಲತೆಯ ಮುಖವು ಗಂಭೀರವಾಯಿತು. ಹೃದಯದಲ್ಲಿ ಸಂತಾಪವು ಹುಟ್ಟಿ, ಅದು ಮುಖದಿಂದ ಹೊರಸೂಸತೊಡಗಿತು. ಕಣ್ಣುಗಳು ಆರಕ್ತತೆ ಹೊಂದಿದವು. ಆಗ ಅವಳು—"ನನ್ನ ಸಲುವಾಗಿ ಅಹಮ್ಮದಶಹನು ಕೋಲಾಹಲವನ್ನೆಬ್ಬಿಸುವವನಿರುವನಲ್ಲವೇ? ಅವನಿಂದ ಹೋಡೀ ರಾಜ್ಯವು ನಾಮಶೇಷವಾಗುವದು. ಈ ಆಹೋರ ದುರ್ಗವೂ, ಈ ರಾಜ ಪ್ರಾಸಾದವೂ, ನೀನೂ, ನನ್ನ ತಂದೆಯವರೂ, ಎಲ್ಲ ರಜಪುತ ವೀರರೂ ನಾಶ ಹೊಂದುವದು ನಿಶ್ಚಯವು. ರಜಪುತ ವೀರಾಂಗನೆಯರೂ ಸತಿಶಿರೋಮಣಿಗಳೂ ನಾಶಹೊಂದುವರು. ಈ ಬಗೆಯಾಗಿ ಎಲ್ಲವೂ ವಿಧ್ವಂಸವಾದರೂ ನಾನು ಮಾತ್ರ ಸಾಯುವದಿಲ್ಲ."

"ನೀನು ಯಾವಾಗ ಸಾಯುವೆ?" ಸತ್ಯೇಂದ್ರನು ತಂಗಿಯ ವಿಲಕ್ಷಣ ಭಾಷಣದಿಂದ ಭ್ರಮಿಷ್ಟನಂತಾಗಿ ಕೇಳಿದನು.

"ಕ್ರೂರ ಪಾತಕಿಯಾದ ಅಹಮ್ಮದಶಹನನ್ನು ಕೊಂದು, ಅವನ ಮಸ್ತಕವನ್ನು ಎಡಗಾಲಿನಿಂದ ತಾಡನ ಮಾಡಿಯೇ ನಾನು ಸಾಯುವವಳು! ನನ್ನ ಮಾತಿಗೆ ಕುಲಸ್ವಾಮಿಯಾದ ಏಕಲಿಂಗಜಿಯೂ, ಸ್ವಾಮಿನಿಯಾದ ಜಗನ್ಮಾತೆ ಗಿರಿರಾಜನಂದಿನಿ ಹೈಮವತಿ ಪರಮೇಶ್ವರಿಯೂ ಸಾಕ್ಷೀಭೂತರು! ಇದೇ ನನ್ನ ನಿಶ್ಚಯವು! ಇದೇ ನನ್ನ ಅಘೋರ ಪ್ರತಿಜ್ಞೆಯು!!"

———

## ವೀರರಲ್ಲ; ಕುರಿಗಳು!

ರಾಣಾ ಪರ್ವತಸಿಂಹನು ಮಹಾರಾಣಾ ಪ್ರತಾಪಸಿಂಹನಂತೆ ಮಾನ ಧನನೂ, ಧರ್ಮಾಭಿಮಾನಿಯೂ ಆದ ತೇಜಸ್ವೀ ರಜಪುತನಾಗಿದ್ದನು. ಆಗ ಸ್ವಸಂತೋಷ ದಿಂದಲೂ ಬಲುಮೆಯಿಂದಲೂ ಹಿಂದು-ಮುಸಲ್ಮಾನರಲ್ಲಿ ಲಗ್ನವಾಗತೊಡಗಿದ್ದವು; ಆದರೆ ಪರ್ವತಸಿಂಹನು ಇಂತಹ ಹೇಸಿ ಕೃತ್ಯಕ್ಕೆ ಮನಸ್ಸು ಮಾಡಲಿಲ್ಲ. ಅಹಮ್ಮದ ಶಹನು ಸಿಂಧದ ಬಾದಶಹನಾಗಿದ್ದು ಒಳ್ಳೆಯ ಬಲಾಢ್ಯನಿದ್ದನು. ಅಂಥ ಬಲಶಾಲಿ ಯೊಡನೆ ಕಾದಲಾರಂಭಿಸಿದರೆ ಸರ್ವನಾಶವಾಗುವದೆಂಬದು ಪರ್ವತಸಿಂಹನ ಮನ ವರಿಕೆಯಾಗಿದ್ದರೂ, ಯವನ ಸಂಬಂಧದಿಂದ ಭ್ರಷ್ಟತೆಹೊಂದಿ ಬರಬಹುದಾದ ಗಂಡಾಂತರದಿಂದ ಪಾರಾಗಲಿಕ್ಕೆ ಹವಣಿಸಲಿಲ್ಲ. ಅವನು ಆಹೋರ ದುರ್ಗವನ್ನು ಸೇರಿ ಯುದ್ಧದ ಸಿದ್ಧತೆಯನ್ನು ಭರದಿಂದ ನಡೆಯಿಸಿದನು. ಸಿಂಧಪ್ರಾಂತದಲ್ಲಿ ಆಹೋರದುರ್ಗವು ಒಳ್ಳೆಯ ದುರ್ಗಮವಾದದ್ದಾಗಿದ್ದರೂ ಪರ್ವತಸಿಂಹನಲ್ಲಿ ಸೇನಾ ಬಲವು ಸಾಕಷ್ಟಿರಲಿಲ್ಲ. ಅದಕ್ಕಾಗಿ ಅವನು ತನ್ನ ಮಿತ್ರ ರಾಜರಲ್ಲಿ ಸಹಾಯ ಯಾಚನೆ ಮಾಡಿದನು. ಅಹಮ್ಮದಶಹನಂಥ ಪ್ರಬಲ ಬಾದಶಹನ ವಿರುದ್ಧವಾಗಿ ನಿಲ್ಲಲಿಕ್ಕೆ ಬಹು ಜನ ರಜಪುತರು ಸಿದ್ಧರಾಗಲಿಲ್ಲ. ಬಾದಶಹನ ವಿರುದ್ಧವಾಗಿ ಪರ್ವತ ಸಿಂಹನಿಗೆ ನೆರವಾಗಲೊಪ್ಪಿದವನೆಂದರೆ, ಅವನ ಮಿತ್ರನಾದ ಭೀಮಸಿಂಹನೊಬ್ಬನೇ.

ಅಹಮ್ಮದಶಹನು ಇಪ್ಪತ್ತು ಸಾವಿರ ಸೈನಿಕರನ್ನೂ, ಅತ್ಯುತ್ತಮ ರೀತಿಯಿಂದ ಸಿಂಗರಿಸಲ್ಪಟ್ಟ ನೂರಾರು ಆನೆಗಳನ್ನೂ ತೆಗೆದುಕೊಂಡು ಆಹೋರದ ಕಡೆಗೆ ಪಯಣ ಮಾಡಿದನು. ಅವನು ಶೀಘ್ರವಾಗಿ ಪಥಾಕ್ರಮಣ ಮಾಡುತ್ತ ನಿಯಮಿತ ದಿನಕ್ಕೆ ಆಹೋರ ದುರ್ಗವನ್ನು ಮುತ್ತಿದನು. ತನ್ನ ಸೇನಾಸಾಗರವನ್ನು ನೋಡಿದೊಡ ನೆಯೆ ರಜಪುತರು ಅಂಜಿ ಒಪ್ಪಂದ ಮಾಡಿಕೊಳ್ಳುವರೆಂದೂ, ಒಪ್ಪಂದವಾದೊಡ ನೆಯೆ ನೂತನ ಪಟ್ಟಮಹಿಷಿಯಾದ ಕನಕಲತೆಯಂತಹ ಕನಕಲತೆಯನ್ನು ವೈಭವ ದಿಂದ ಕರೆದೊಯ್ಯಲಿಕ್ಕೆ ಅನುಕೂಲವಾಗಬೇಕೆಂದೂ ಅವನು ತನ್ನಲ್ಲಿದ್ದ ಎಲ್ಲ ಆನೆ ಗಳನ್ನು ಸಿಂಗರಿಸಿಯೆ ತಂದಿದ್ದನು; ಆದರೆ ಸೈನ್ಯವು ದುರ್ಗದ ಕೆಳಗೆ ಬಂದ ಕೂಡಲೆ ಅವನ ಭ್ರಮೆಯು ದೂರಾಯಿತು. ಕೋಟೆಯ ಬಾಗಿಲುಗಳು ಮುಚ್ಚಲ್ಪಟ್ಟಿದ್ದವು. ದುರ್ಗದ ಮೇಲೆ ವೀರ ರಜಪುತರು ಸಮರಸಿದ್ಧರಾಗಿರುವರೆಂಬ ವಾರ್ತೆಯೂ ತಿಳಿ ಯಿತು. ಕೂಡಲೆ ಅವನು ದುರ್ಗವನ್ನು ಏರುವದಕ್ಕೆ ಸೈನಿಕರಿಗೆ ಆಜ್ಞಾಪಿಸಿದನು. ಬಾದಶಾಹೀ ಸೈನ್ಯವು ದುರ್ಗಪ್ರವೇಶ ಮಾಡಲಿಕ್ಕೆ ಮುಂದುವರಿಯಿತು. ಅಷ್ಟರಲ್ಲಿ ಒಂದು ಬಾಣವು ಸುಯ್ಗುಡುತ್ತ ಬಂದು, ಅಂಬಾರಿಯಲ್ಲಿ ಕುಳಿತಿದ್ದ ಬಾದಶಹನ ಮುಕುಟವನ್ನು ಹಾರಿಸಿತು. ಪ್ರಾರಂಭದಲ್ಲಿಯೆ ಶತ್ರುಶರದಿಂದ ಮುಕುಟವು ಹಾರಿದ್ದ ರಿಂದ ಅವನ ಮನಸ್ಸು ಅಪಶಕುನ ಭಯದಿಂದ ವ್ಯಾಕುಲಗೊಂಡಿತು. ದುರ್ಗದ ಮೇಲಿಂದ ತನ್ನ ಶಿರಸ್ತ್ರಾಣವನ್ನು ಹಾರಿಸಿದ ಧನುರ್ಧಾರಿ ವೀರ ರಜಪುತನನ್ನು ಅವನು ಕೊಂಡಾಡಿದನು. ಮುಕುಟ ಹಾರಿಸಿದ ಶರವಾದರೂ ಮುಕುಟದ ಬಳಿ

ಯಲ್ಲೇ ಬಿದ್ದಿತು. ಅದರ ತುದಿಗೆ ಒಂದು ಪತ್ರವು ಕಟ್ಟಲ್ಪಟ್ಟಿತ್ತು. ಅಹಮ್ಮದಶಹನು ಆ ಬಾಣವನ್ನು ಕೈಯಲ್ಲಿ ತೆಗೆದುಕೊಂಡು, ಆ ಪತ್ರವನ್ನು ಓದಿದನು.

"ಮದಾಂಧ ಬಾದಶಹಾ! ಯಾವ ಧನುರ್ಧಾರಿಯು ನಿನ್ನ ಮುಕುಟವನ್ನು ಹಾರಿಸಿದನೋ, ಅವನು ಮನಸ್ಸಿನ ಮೇಲೆ ತೆಗೆದುಕೊಂಡರೆ ನಿಮಿಷ ಮಾತ್ರದಲ್ಲಿ ನಿನ್ನ ಮಸ್ತಕವನ್ನು ಹಾರಿಸಲಿಕ್ಕೆ ಸಮರ್ಥನಿರುವನು; ವಾಸ್ತವವಾಗಿ ನಿನ್ನನ್ನು ಹೀಗೆ ಮರೆಮೋಸದಿಂದಲೆ ಕೊಲ್ಲಬೇಕಾಗಿತ್ತು; ಆದರೆ ರಜಪುತರು ಧನುರ್ಯುದ್ಧ ಪ್ರಿಯರು. ಅಸಾವಧ ಸ್ಥಿತಿಯಲ್ಲಿದ್ದ ವೈರಿಯನ್ನು ಕಪಟದಿಂದ ಕೊಲ್ಲಲಾರರು. ನೀನು ಕನಕಲತೆಯ ಆಶೆಯನ್ನು ತೊರೆದು ಹೊರಟುಹೋಗದಿದ್ದರೆ, ಜೀವಕ್ಕೆ ಎರವಾಗುವೆ. ಅಹಮ್ಮದಶಹಾ! ನಿನಗೆ ಕನಕಲತೆಯ ದೇಹಭಸ್ಮವು ಸಹ ದೊರೆಯಲಾರದು. ವೃಥಾ ಪ್ರಾಣನಾಶ ಮಾಡಬೇಡ; ಆತ್ಮನಾಶ ಮಾಡಿಕೊಳ್ಳಬೇಡ. ಒಂದು ವೇಳೆ ನೀನು ರಜಪುತರನ್ನು ಗೆಲ್ಲಬಹುದು; ಆದರೆ ಕನಕಲತೆಯನ್ನು ಖಂಡಿತವಾಗಿಯೂ ಗೆಲ್ಲಲಾರೆ!

ನಿನ್ನ ದೇಹಹೀನ ಮಸ್ತಕವನ್ನಿಚ್ಛಿಸುವ, ಮಧುರಸಿಂಹ."

ಪತ್ರವನ್ನೋದಿದ ಕೂಡಲೆ ಬಾದಶಹನ ಎದೆಯು ನಡುಗಿತು. ಕೂಡಲೆ ತಾನು ಕುಳಿತ ಆನೆಯನ್ನು ಸೇನೆಯ ಹಿಂಭಾಗದಲ್ಲಿ ಒಯ್ಯಬೇಕೆಂದು ಮಾವುತನಿಗೆ ಹೇಳಿದನು. ಅನಂತರದಲ್ಲಿ ಅವನು ತನ್ನ ಸೈನಿಕರನ್ನುದ್ದೇಶಿಸಿ,—"ಸೈನಿಕರೆ, ಇನ್ನು ಮೇಲೆ ಅನುಮಾನಪಡದೆ ಕೋಟೆಯ ಮೇಲೆ ಸಾಗಿ ಹೋಗಿರಿ."

ರಾಜಾದೇಶದಂತೆ ನವೋತ್ಸುಕವಾದ ಯವನ ಸೇನಾಸಾಗರವು ಕೋಟೆಯನ್ನೇರಲಿಕ್ಕೆ ರಭಸದಿಂದ ಸಾಗಿತು. ಕೋಟೆಯಲ್ಲಿಯ ರಜಪುತ ವೀರರು ಯವನರ ಏರಾಟವನ್ನು ತಗ್ಗಿಸಿ ತಮ್ಮ ವಿಲಕ್ಷಣವಾದ ಶರಸಂಧಾನ ಚತುರತೆಯಿಂದ ಅವರನ್ನು ಬೆರಳು ಕಚ್ಚುವಂತೆ ಮಾಡಬೇಕೆಂದು, ಒಮ್ಮೆಲೆ ಶರವೃಷ್ಟಿಗರೆಯಹತ್ತಿದರು. ಆಳತೆಗೆಟ್ಟು ಬೀಳತೊಡಗಿದ ಬಾಣಗಳ ಸುರಿಮಳೆಯಿಂದ ಯವನ ಸೈನಿಕರು ಓಂಜರಿದರು. ರಜಪುತರ ಒಂದೊಂದು ಬಾಣವು ಒಂದೊಂದು ಪ್ರಾಣವನ್ನೇ ಆಹುತಿ ತೆಗೆದುಕೊಳ್ಳ ಹತ್ತಿತು.

ತನ್ನ ಸೈನ್ಯವು ಹಿಂಜರಿಯತೊಡಗಿದ್ದನ್ನು ನೋಡಿ ಬಾದಶಹನು ಸಂತಪ್ತನಾದನು. ಆಗ ಅವನು ಸೈನಿಕರನ್ನು ಕುರಿತು:—"ರಣಹೇಡಿಗಳೆ, ಜೀವಗಳ್ಳರೆ, ಹೀಗೆ ರಣ-ಮರಣಗಳಿಗೆ ಅಂಜುತ್ತಿದ್ದರೆ ರಣಭೂಮಿಗೆ ಏಕೆ ಬರಬೇಕಾಗಿತ್ತು? ಅಂತಃಪುರದಲ್ಲಿದ್ದು ಸ್ತ್ರೀಯರ ಸೆರಗಿನಿಂದ ಮುಖ ಮುಚ್ಚಿಕೊಂಡು ಕುಳಿತು ಬಿಟ್ಟಿದ್ದರೆ ಒಳಿತಾಗುತ್ತಿತ್ತು. ನಾಮಾಂಕಿತ ಯೋಧರೆಂಬ ಭ್ರಮೆಯಿಂದ ನಾನು ವ್ಯರ್ಥವಾಗಿ ನಿಮ್ಮನ್ನು ತಂದೆನು. ಇಪ್ಪತ್ತು ಸಾವಿರ ಜನರಿರುವಿರಿ; ಅಲ್ಪ ಸಂಖ್ಯಾಕರ ಅಲ್ಪ ಸಾಹಸಕ್ಕೆ ಅಂಜಿ ಓಡುತ್ತಿರುವಿರಿ. ಈ ನಿಮ್ಮ ಕೃತಿಯು ನಾಚಿಕೆಗೇಡಿತನದ್ದಲ್ಲವೇ? ಯಾರು ಹಿಂದೆ ಸರಿಯುವರೋ ಅವರಿಗೆ ಮರಣದಂಡನೆಯು ವಿಧಿಸಲ್ಪಡುವದು."

ಸೈನಿಕರು ಭೀಷಣವಾದ ರಾಜಾಜ್ಞೆಯನ್ನು ಕೇಳಿ ಭಯವಿಹ್ವಲರಾದರು. ಮುಂದೆ ಹೆಜ್ಜೆಯಿಟ್ಟರೂ ಮರಣ; ಹಿಂದೆ ಹೆಜ್ಜೆಯಿಟ್ಟರೂ ಮರಣ. ಈ ಎರಡು

ಮರಣಗಳಲ್ಲಿ ಯಾವ ಮರಣವು ರುಚಿಕರವಿರಬಹುದೆಂದು ಯೋಚಿಸಿದರು. ಮುಂದೆ ಹೆಜ್ಜೆಯಿಟ್ಟರೆ ಈಗಲೇ ಮರಣ; ಹಿಂದೆ ಹೆಜ್ಜೆಯಿಟ್ಟರೆ ಇಂದಿನ ಸಾವು ನಾಳೆಗೆ ಎಂದು ನಿರ್ಧರಿಸಿ, ಬಹು ಜನ ಸೈನಿಕರು ಹಿಂದೆ ಸರಿದರು. ದುರ್ಗದ ಮೇಲಿಂದ ಬಾಣಗಳ ಸುರಿಮಳೆಯು ನಡದೇ ಇತ್ತು. ಯವನ ಸೈನಿಕರು ಪ್ರತಿ ಕ್ಷಣಕ್ಕೆ ಒಬ್ಬೊಬ್ಬರು ಇಬ್ಬಿಬ್ಬರಂತೆ ಇಳೆಗುರುಳತೊಡಗಿದ್ದರು. ಸೈನಿಕರು ಹಿಂದೆ ಸರಿದದ್ದರಿಂದ ಬಾದಶಹನು ಮತ್ತಿಷ್ಟು ಸಂತಪ್ತನಾದನು. ಅವನು ತನ್ನ ಸಿಟ್ಟು ನುಂಗಿಕೊಂಡು ಅವರನ್ನು ಉತ್ಸಾಹಗೊಳಿಸುತ್ತ ಮತ್ತೆ ಮುಂದೆ ನೂಕಿದನು. ಏಣಿಗಳ ಸಹಾಯದಿಂದ ಆದಷ್ಟು ಬೇಗನೆ ಕೋಟೆಯಲ್ಲಿ ನುಗ್ಗಬೇಕೆಂದು ಅವನು ಸೈನಿಕರಿಗೆ ಸೂಚಿಸಿದನು. ಒಡೆಯನ ಹೇಳಿಕೆಯಂತೆ ಯವನ ಸೈನಿಕರು ಬಾಣಗಳ ಸುರಿಮಳೆಯಲ್ಲಿಯೇ ಒಳ್ಳೆಯ ಕಲಿತನದಿಂದ ಕೋಟೆಯ ಕೆಳಗೆ ಬಂದರು. ಅವರು ಗೋಡೆಗೆ ಏಣಿಗಳನ್ನು ಹಾಕಿ ಏರತೊಡಗಿದರು. ಕೂಡಲೆ ಕೋಟೆಯ ಮೇಲಿಂದ ಶಿಲಾವೃಷ್ಟಿಯು ಪ್ರಾರಂಭವಾಯಿತು. ಬಾಣಗಳಂತೂ ಲೆಕ್ಕವಿಲ್ಲದೆ ಬೀಳತೊಡಗಿದ್ದವು. ಶಿಲಾವೃಷ್ಟಿ-ಬಾಣವೃಷ್ಟಿಗಳ ಆಘಾತದಿಂದ ಯವನ ಸೈನಿಕರು ಹತಾಶರಾದರು. ಅವರು ಮತ್ತೆ ಹಿಂದೆ ಸರಿದರು. ತನ್ನ ಈ ದುರವಸ್ಥೆಯನ್ನು ನೋಡಿ ಅಹಮ್ಮದಶಹನು ಎದೆಯೊಡೆದನು. ಇಪ್ಪತ್ತು ಸಾವಿರ ಸೈನಿಕರನ್ನು ತಂದಿರುವನೆಂಬ ಅವನ ಹೆಮ್ಮೆಯು ನಷ್ಟವಾಯಿತು. ಇಪ್ಪತ್ತು ಸಾವಿರ ವೀರರನ್ನು ತಂದಿರದೆ, ಇಪ್ಪತ್ತು ಸಾವಿರ ಕುರಿಗಳನ್ನು ತಂದಿರುವೆನೆಂದು ಅವನು ಖೇದಪಡತೊಡಗಿದನು. ಅನಂತರದಲ್ಲಿ ಅವನು ಪ್ರಧಾನ ಸೇನಾನಾಯಕನಾದ ಇಬ್ರಾಹಿಮಖಾನನನ್ನೂ ಉಪಸೇನಾನಾಯಕನಾದ ರೋಷನಖಾನನನ್ನೂ ಕರೆಯಿಸಿ ಇನ್ನೊಂದು ಬಾರಿ ಕೊನೆಯ ಪ್ರಯತ್ನ ಮಾಡಬೇಕೆಂದು ಸೂಚಿಸಿದನು. ಸೈನಿಕರಿಗೆ ಇನಾಮಿನ ಆಶೆ ಹಚ್ಚಿದನು.

ಮತ್ತೆ ದಾಳಿಯು ಪ್ರಾರಂಭವಾಯಿತು. ಈ ಸಾರೆಯ ಲಗ್ಗೆಯು ಒಳ್ಳೆಯ ನಿಕರದ್ದಿತ್ತು. ಯವನ ಸೈನಿಕರು ಒಳ್ಳೆಯ ಆವೇಶದಿಂದ ಕೋಟೆಯನ್ನೇರತೊಡಗಿದರು ಕೂಡಲೆ ವೀರಾಗ್ರಣಿಗಳಾದ ರಜಪುತರು ಅಗ್ನಿಗೋಲಕ ಯಂತ್ರಗಳನ್ನು ಹೂಡಿದರು. ಶಿಲಾವೃಷ್ಟಿ ಬಾಣವೃಷ್ಟಿಯಂತೂ ಕಟ್ಟಾಗಿದ್ದಿಲ್ಲ. ಭಯಂಕರವಾದ ಅಗ್ನಿಗೋಲಕ ವೃಷ್ಟಿಯು ಪ್ರಾರಂಭವಾದೊಡನೆಯೆ ಯವನ ಸೈನಿಕರು ಧೃತಿಗುಂದಿದರು. ಕೂಡಲೆ ಅವರು ಜೀವವುಳಿಸಿಕೊಳ್ಳುವದಕ್ಕಾಗಿ ಎಷ್ಟು ರಭಸದಿಂದ ಮುಂದೆ ಬಿದ್ದಿದ್ದರೋ, ಅದರ ಇಮ್ಮಡಿ ರಭಸದಿಂದ ಹಿಂದೆ ಸರಿದರು.

ಬಹು ದೂರ ಸೇನಾಸಾಗರದ ಹಿಂದೆ ನಿಂತು ಯುದ್ಧನಿರೀಕ್ಷಣೆ ಮಾಡುತ್ತಿದ್ದ ಅಹಮ್ಮದಶಹನು ತನ್ನ ಸೈನಿಕರ ಪಲಾಯನವನ್ನು ನೋಡಿ ಖಿನ್ನನಾಗಿ—"ಇವರು ವೀರರಲ್ಲ; ಕುರಿಗಳು! ಅಲ್ಪ ಸಂಖ್ಯೆ ರಜಪುತ ಸೈನ್ಯವನ್ನು ನಾಶಮಾಡುವದು ನನ್ನ ಸಾಗರೋಪಮವಾದ ಸೈನ್ಯದಿಂದಾಗದಿದ್ದಮೇಲೆ, ಈ ಸೈನಿಕರಿಗೆ ವೀರರೆಂದು ಏಕೆ ಅನ್ನಬೇಕು? ಇವರು ವೀರರಲ್ಲ; ಕುರಿಗಳೇ ನಿಜವು!'' ಎಂದು ಉದ್ಗಾರ ತೆಗೆದನು.

## ಅಂತಿಮ ವಿಚಾರ.

ಅಹಮ್ಮದಶಹನು ಆಹೋರದುರ್ಗವನ್ನು ಮುತ್ತಿ ಮೂರು ತಿಂಗಳಾಗಿತ್ತು. ಅವನು ಈ ಅವಧಿಯಲ್ಲಿ ಎಷ್ಟೋ ಸಾರೆ ದುರ್ಗದ ಮೇಲೆ ಆಕ್ರಮಣ ಮಾಡಿದ್ದರೂ, ಪ್ರಾಣನಾಶದ ಹೊರತು ಮತ್ತೇನೂ ಲಾಭ ಹೊಂದಿದ್ದಿಲ್ಲ. ಸೋಲಿನ ಮೇಲೆ ಸೋಲು ಹೊಂದಿದ ಅವನು ಕ್ರುದ್ಧನಾಗಿ ಹೋಗಿದ್ದನು. ವಿಜಯ ಹೊಂದಿ ನೂತನ ಪಟ್ಟ ಮಹಿಷಿಯ ಲಾಭ ಹೊಂದಬೇಕೆಂದು ಮಹತ್ವಾಕಾಂಕ್ಷೆ ತಳೆದಿದ್ದ ಶಹನು ರಾಜಧಾನಿಯಿಂದ ಹೊಸದಾಗಿ ಪ್ರತಾಪಶಾಲಿಗಳಾದ ಸೇನಾಪತಿಗಳನ್ನೂ ಶೂರ ಸೈನಿಕರನ್ನೂ ತರಿಸಿಕೊಂಡಿದ್ದನು. ಎಷ್ಟು ಸೈನ್ಯವಿದ್ದರೇನು? ಎಂಥ ಸೇನಾನಾಯಕರಿದ್ದರೇನು? ದುರ್ಭೇದ್ಯವಾದ ಆಹೋರದುರ್ಗವು ಎಂಥ ಶಕ್ತಿಗೂ ಮಣಿಯುವಂಥದಿದ್ದಿಲ್ಲ. ಕೊನೆಗೆ ಮಾನಗೇಡಿಯಾಗಿ, ಬಂದ ದಾರಿಗೆ ಸುಂಕವಿಲ್ಲವೆಂಬಂತೆ ತಿರುಗಿ ಹೋಗಬೇಕಾಗುವದೆಲ್ಲಿಯೋ ಎಂದು ಅವನು ಚಡಪಡಿಸಹತ್ತಿದನು. ಇಷ್ಟು ದೀರ್ಘಕಾಲದ ಯುದ್ಧದಲ್ಲಿ ರಜಪುತರ ಒಂದು ಹನಿ ರಕ್ತವಾದರೂ ಭೂಮಿಗೆ ಬೀಳದೆ, ಒಂದು ಪ್ರಾಣಜ್ಯೋತಿಯಾದರೂ ನೊಂದದೆ, ಕೇವಲ ತನ್ನ ಸೈನ್ಯದ ರಕ್ತದ ಕಾಲುವೆಯು ಹರಿದದ್ದನ್ನೂ, ತನ್ನವರೇ ಸಹಸ್ರಾವಧಿ ಜನರು ಮೃತಿಹೊಂದಿದ್ದನ್ನೂ ನೋಡಿ ಬಾದಶಹನ ಹೃದಯವು ತಳಮಳಿಸಹತ್ತಿತು. ದುರ್ಗವನ್ನು ವಶಪಡಿಸಿಕೊಳ್ಳುವದು ತೀರ ಅಸಾಧ್ಯವೆಂದು ಅವನ ಮನಸ್ಸಿಗೆ ಚನ್ನಾಗಿ ಹೊಳೆಯಿತು; ಆದರೆ ಅವನ ಮನಸ್ಸಿನಲ್ಲಿ ಒಂದು ದೊಡ್ಡ ಧೈರ್ಯವಿತ್ತು. ಮುತ್ತಿಗೆಯು ಬಲವಾದದ್ದಿದ್ದುದರಿಂದ ಹೊರಗಿನಿಂದ ಕೋಟೆಯೊಳಗಿನ ಜನರಿಗೆ ಅನ್ನ ಸಾಮುಗ್ರಿಯು ದೊರೆಯುವಂತಿದ್ದಿಲ್ಲ. ಒಳಗಿನ ಸಾಮುಗ್ರಿಯು ತೀರಿದ ಮೇಲೆ ರಜಪುತರು ತಾವಾಗಿ ಸಂಧಿ ಮಾಡಿಕೊಳ್ಳುವರೆಂದು ಅವನು ಸಂತೋಷ ಹಚ್ಚಿಕೊಳ್ಳತೊಡಗಿದ್ದನು.

ವಸ್ತುಸ್ಥಿತಿಯು ಅಹಮ್ಮದಶಹನ ವಿಚಾರದಂತೆಯೆ ಇತ್ತು. ಮುತ್ತಿಗೆಯು ಒಳ್ಳೆಯ ಬಲವಾದದ್ದಿದ್ದುದರಿಂದ ನೊಣ-ನೊರಜುಗಳು ಸಹ ಒಳಗಿನಿಂದ ಹೊರಗೂ ಹೊರಗಿನಿಂದ ಒಳಗೂ ಪೋಗಲಿಕ್ಕೆ ಅವಕಾಶವಿರಲಿಲ್ಲ. ಕೋಟೆಯಲ್ಲಿಯ ಅನ್ನ ಸಂಗ್ರಹವೆಲ್ಲ ಬಹುಶಃ ತೀರಿದಂತಾಗಿತ್ತು; ಬಹಳವಾದರೆ ಒಂದು ವಾರ ಮಾತ್ರ ಸಾಲುವಷ್ಟು ಸಾಮುಗ್ರಿಯು ಉಳಿದಿತ್ತು. ಹೊರಗಿನಿಂದ ಯಾವ ವಿಧದ ಅನುಕೂಲತೆಯೂ ಒದಗುವಂತಿದ್ದಿಲ್ಲ. ಹೀಗಾಗಲು ರಜಪುತರು ಗಾಬರಿಯಾದರು; ಆದರೆ ಅವರು ಯುದ್ಧಪರಾವೃತ್ತರಾಗಬೇಕೆಂದಾಗಲಿ, ಬಾದಶಹನ ಮನೀಷೆಯನ್ನು ಪೂರೈಸಿ ಸಂಧಿ ಮಾಡಬೇಕೆಂದಾಗಲಿ ಆಲೋಚನೆ ಮಾಡಲಿಲ್ಲ.

ಪರ್ವತಸಿಂಹನು ಮಂತ್ರಣಾಗಾರದಲ್ಲಿ ಕುಳಿತಿದ್ದನು. ಅವನು ಅಂತಿಮ ವಿಚಾರಕ್ಕಾಗಿ ತನ್ನ ಸರದಾರ-ಸೇನಾಪತಿಗಳನ್ನೂ ಮುಖ್ಯ ಮುಖ್ಯ ಅಧಿಕಾರಿ ವರ್ಗವನ್ನೂ ಕರೆಯಿಸಿದನು. ಆಗ ಅವನು ಸಭಿಕರನ್ನು ಕುರಿತು ಉಚ್ಚಕಂಠದಿಂದ--"ವೀರವರ

ಕ್ಷತ್ರಿಯ ಕುಲದೀಪಕರೆ, ಪಾತಕಿಯಾದ ಅಹಮ್ಮದಶಹನು ಇನ್ನೂ ಮುತ್ತಿಗೆಯನ್ನೆತ್ತಿಸುವ ಚಿಹ್ನವಿಲ್ಲ. ಮಾನಾಭಿಮಾನ, ಧರ್ಮ ಕೀರ್ತಿರಕ್ಷಕವಾದ ಆಘೋರದುರ್ಗವೂ, ರಾಷ್ಟ್ರಾಭಿಮಾನಿಗಳೂ ಧರ್ಮವಂತರೂ ಆದ ನೀವೂ ಅಹಮ್ಮದಶಹನಂಥ ನೂರಾರು ಶಹರಿಗೆ ಸೊಪ್ಪುಹಾಕುವದಿಲ್ಲವೆಂಬದು ನನಗೆ ಗೊತ್ತಿದೆ; ಆದರೆ ಮಾಡುವದೇನು? ಕೋಟೆಯೊಳಗಿನ ಅನ್ನ ಸಂಗ್ರಹವು ಒಂದು ವಾರ ಸಹ ಸಾಲುವಂತಿಲ್ಲ. ಮುಂದೆ ಯಾವ ಉಪಾಯ ಮಾಡಬೇಕೆಂಬದರ ಬಗ್ಗೆ ನಿಮ್ಮ ಸಲಹೆ ತೆಗೆದುಕೊಳ್ಳಲಿಕ್ಕೆ ಕರೆಯಿಸಿರುವೆನು. ನಿಮ್ಮ ಅಭಿಪ್ರಾಯವೇನು? ಬಾದಶಹನೊಡನೆ ಸಂಧಿ ಮಾಡಿಕೊಳ್ಳುವದಂತು ಕಠಿಣ. ಯಾಕಂದರೆ ಒಪ್ಪಂದದ ಕಟ್ಟಳೆಯ ಮೊದಲನೆಯ ಸಾಲಿನಲ್ಲಿಯೇ ರಾಜಕುಮಾರಿ ಕನಕಲತೆಯ ಬೇಡಿಕೆಯುಂಟು. ಮುಂದೆ ಉಪಾಯವೇನು? ಎಲ್ಲರೂ ನಿಮ್ಮ ಅಭಿಪ್ರಾಯಗಳನ್ನು ನಿರ್ದಾಕ್ಷಿಣ್ಯದಿಂದ ಅರುಹಿರಿ.''

ಪರ್ವತಸಿಂಹನ ಮಾತುಗಳನ್ನು ಕೇಳಿ ಪ್ರಧಾನ ಸೇನಾಧ್ಯಕ್ಷನಾದ ಮಾನಸಿಂಹನು ಆಸನದಿಂದೆದ್ದು ನಮಸ್ಕಾರ ಮಾಡಿ—"ಮಹಾರಾಜರೆ, ಈ ಸಂಸಾರದಲ್ಲಿ ಹುಟ್ಟಿದವನು ಸಾಯಲೇಬೇಕು. ಕರ್ತವ್ಯ ಧರ್ಮಭ್ರಷ್ಟರಾಗಿ ಶತಮಾನ ಆಯುಷ್ಯ ಪಡೆಯುವದಕ್ಕಿಂತ ಸ್ವಧರ್ಮಕ್ಕಾಗಿಯೂ, ಸ್ವದೇಶಕ್ಕಾಗಿಯೂ, ಸ್ವಾಭಿಮಾನ ರಕ್ಷಣೆಗಾಗಿಯೂ ಹೆಣಗಿ ಮಡಿಯುವದು ಕೀರ್ತಿಪ್ರದವು; ಪಾರಲೌಕಿಕ ಸೌಖ್ಯಪ್ರದವು. ರಜಪುತರು ಯಶೋಗೌರವಗಳ ರಕ್ಷಣೆಗಾಗಿ ಆತ್ಮ ಬಲಿದಾನ ಮಾಡಲೇಬೇಕು. ಮಾತೃಭೂಮಿಗಾಗಿ ತಮ್ಮ ಪ್ರಾಣಗಳನ್ನು ನಿವಾಳಿಸಿ ಚಲ್ಲಲಿಕ್ಕೇಬೇಕು. ವೀರ ರಜಪುತರು ವೀರಗತಿಯನ್ನೂ ಸದ್ಗತಿಯನ್ನೂ ಬಯಸುವರಲ್ಲದೆ, ಅವರು ಎಂದೂ ಅಧೋಗತಿಯನ್ನು ಇಚ್ಛಿಸಲಾರರು. ನನ್ನ ವಾಣಿಯು ಇಲ್ಲಿ ಕುಳಿತ ಎಲ್ಲ ರಜಪುತ ವೀರರ ಪ್ರತಿಧ್ವನಿಯೆಂದು ನನ್ನ ಆತ್ಮವಿಶ್ವಾಸ.'' ''ಅವಶ್ಯ, ಅವಶ್ಯ!''

ಎಲ್ಲ ಕಡೆಯಿಂದಲೂ ನೂರಾರು ಮುಖಗಳಿಂದ ಸಮ್ಮತಿ ಸೂಚಕ ಉದ್ಗಾರವು ಹೊರಟಿತು. ಅನಂತರದಲ್ಲಿ ಪರ್ವತಸಿಂಹನು ಮಾನಸಿಂಹನನ್ನು ಕುರಿತು:—''ಸೇನಾಪತಿಗಳೇ, ಇನ್ನು ಮೇಲೆ ಕೋಟೆಯೊಳಗೆ ಅಡಗಿಕೊಂಡು ಯುದ್ಧ ನಡೆಯಿಸುವದು ಸಾಧ್ಯವಿಲ್ಲ. ಕೋಟೆಯ ಬಾಗಿಲು ತೆಗೆದು ಶತ್ರುಗಳ ಮೇಲೆ ಬಿದ್ದು ಹೊಡೆಯಬೇಕು; ಇಲ್ಲವೆ ಮಡಿಯಬೇಕು. ಇದೇ ನನ್ನ ಅಂತಿಮ ವಿಚಾರವು. ಸ್ತ್ರೀಯರ ವ್ಯವಸ್ಥೆಯನ್ನು ಹೇಗೆ ಮಾಡಬೇಕು? ಅವರು ಮಾನ-ಶೀಲಗಳ ರಕ್ಷಣೆಗಾಗಿ ಜೋಹಾರ ವ್ರತವನ್ನು ಮಾಡುವದು ವಿಹಿತವೆನಿಸುವದಿಲ್ಲವೆ?''

''ಪುರುಷರು ಧಾರಾತೀರ್ಥದಲ್ಲಿ ಆತ್ಮಾರ್ಪಣೆಮಾಡಿ ವೀರಗತಿಹೊಂದುವದೂ, ಸ್ತ್ರೀಯರು ಜೋಹಾರವ್ರತದಿಂದ ಸದ್ಗತಿಹೊಂದುವದೂ ಸದ್ಯದ ಸರಳ ಮಾರ್ಗಗಳು."

ಮಾನಸಿಂಹನು ಹೀಗೆ ನುಡಿದ ಮೇಲೆ ಮಧುರಸಿಂಹನು ಎದ್ದು ನಿಂತು:—''ಮಹಾರಾಜರೇ, ಸೇನಾಪತಿಗಳೇ, ಶಸ್ತ್ರವಿದ್ಯೆ ಬಲ್ಲವರೂ ಸಮರೋತ್ಸುಕರೂ ಆದ ಸ್ತ್ರೀಯರು ಪುರುಷವೇಷ ಧಾರಣಮಾಡಿ ರಣಕ್ಕೆ ಬರಲಿಕ್ಕೆ ಆತಂಕವಿರಬಾರದು.''

"ಮಧುರಸಿಂಹರ ಸಲಹೆಯು ಅನುಕರಣೀಯವಿರುವದು" ಎಂದು ಸತ್ಯೇಂದ್ರ ಸಿಂಹನು ತನ್ನ ಅಭಿಪ್ರಾಯವನ್ನು ತಿಳಿಸಿದನು.

ಅನಂತರದಲ್ಲಿ ಮುಂದಿನ ಕಾರ್ಯಕ್ಕಾಗಿ ಎಲ್ಲ ಜನರು ತೆರಳಿದರು. ಪರ್ವತ ಸಿಂಹನು ಮಂತ್ರಣಾಗಾರದಿಂದೆದ್ದು ಅಂತಃಪುರಕ್ಕೆ ತೆರಳಿದನು. ಅವನು ಜೋಹಾರ ವ್ರತಾಚರಣೆ ಮಾಡಲಿಕ್ಕೆ ಸ್ತ್ರೀವೃಂದಕ್ಕೆ ಉಪದೇಶಿಸಿದನು. ಎಲ್ಲ ಸ್ತ್ರೀಯರು ಆನಂದದಿಂದ ಅವನ ಮಾತಿಗೆ ಒಪ್ಪಿದರು.

ಮಾರನೆಯ ದಿನ ಸಂಧ್ಯಾ ಸಮಯಕ್ಕೆ ದುರ್ಗದ ಬೈಲಲ್ಲಿ ದೊಡ್ಡ ಚಿತೆಯು ರಚಿಸಲ್ಪಟ್ಟಿತು. ಮೊದಲು ಅದರಲ್ಲಿ ಹೋಡೀರಾಜ್ಯದ ಐಶ್ವರ್ಯವು ಬಲಿಕೊಡಲ್ಪಟ್ಟಿತು. ಅಮೌಲ್ಯವಾದ ವಸ್ತ್ರಾಲಂಕಾರಗಳೂ ಮುತ್ತು-ಮಾಣಿಕಗಳೂ ಅಗ್ನಿನಾರಾಯಣನಿಗೆ ಸಮರ್ಪಿಸಲ್ಪಟ್ಟವು. ಅನಂತರದಲ್ಲಿ ಮಹಾಸಾಧ್ವಿಯರಾದ ಕ್ಷಾತ್ರ ರಮಣಿಯರು ಅಗ್ನಿಪ್ರದಕ್ಷಿಣೆ ಮಾಡಿ ಚಿತೆಯಲ್ಲಿ ದುಮುಕಿದರು. ಸರ್ವಭಕ್ಷಕನಾದ ಅಗ್ನಿದೇವನು ಕೆಲವು ವೇಳೆಯಲ್ಲೇ ಅವರನ್ನು ಭಸ್ಮ ಮಾಡಿ ಬಿಟ್ಟನು!

---

## ಸೇಡೇ ನನ್ನ ಹೆಗ್ಗುರಿ!

"ನನ್ನ ಸಲುವಾಗಿ ಎಂತಹ ಅನರ್ಥವು ಸಂಘಟಿಸಿತಲ್ಲ! ನನ್ನ ಸಲುವಾಗಿ ಸಾವಿರಾರು ರಜಪುತ ಕುಲಯುವತಿಯರು ಅಗ್ನಿಕಾಷ್ಠ ಭಕ್ಷಣ ಮಾಡಬೇಕಾಯಿತು. ನನ್ನ ಸಲುವಾಗಿ ಸಾವಿರಾರು ರಜಪುತ ವೀರರು ರಣಕುಂಡದಲ್ಲಿ ಆತ್ಮಬಲಿದಾನ ಮಾಡುವ ಪ್ರಸಂಗವೊದಗಿತು. ನನ್ನ ಸಲುವಾಗಿ ಹೋಡೀ ರಾಜ್ಯವೂ ರಾಜವಂಶವೂ ಸಂಪೂರ್ಣವಾಗಿ ವಿಧ್ವಂಸವಾಗುವ ಪ್ರಸಂಗವೊದಗಿತು. ನಾನೇ ಸರ್ವನಾಶಕ್ಕೆ ಕಾರಣಳಾದೆನು. ನನ್ನ ತಂದೆಯವರೂ ಬಂಧುವಾದ ಸತ್ಯೇಂದ್ರಸಿಂಹನೂ ನಾಳಿನ ಯುದ್ಧದಲ್ಲಿ ಧಾರಾತೀರ್ಥದಲ್ಲಿ ಶಯನ ಮಾಡುವರು. ನನ್ನ ವಂಶದ ಕೊನೆಯು ನಾಳಿನ ದಿವಸವೇ ಆಗಿ ಹೋಗುವದು. ನಾನೇ ಸ್ವಜನ ಘಾತಕಿಯಾದಂತಾಯಿತು. ನನ್ನಿಂದಲೇ ಹೋಡೀ ರಾಜ್ಯದ ಸರ್ವನಾಶವು! ಹಾಯ!"

ಕನಕಲತೆಯು ತನ್ನ ಕೋಣೆಯಲ್ಲಿ ಕುಳಿತುಕೊಂಡು ಈ ಮೇರೆಗೆ ಅನುತಾಪೋದ್ಗಾರ ತೆಗೆಯುತ್ತ ದುಃಖಿಸತೊಡಗಿದ್ದಳು. ಎಲ್ಲ ಅನರ್ಥಗಳಿಗೆ ತಾನೇ ಕಾರಣಳಾದದ್ದಕ್ಕಾಗಿ ಅವಳು ತನ್ನನ್ನು ತಾನೇ ಯಥೇಷ್ಟವಾಗಿ ನಿಂದಿಸಿಕೊಳ್ಳತೊಡಗಿದ್ದಳು. ಇದೇ ಸಮಯದಲ್ಲಿ ಅವಳ ಹಿಂದೆ ಒಂದು ವ್ಯಕ್ತಿಯು ಬಂದು:—"ಅಸಾಹಸಿನಿಯಾದ ಸ್ತ್ರೀಯೇ! ನೀನು ಇಲ್ಲಿ ಅಡಗಿಕೊಂಡು ಅಳತೊಡಗಿರುವೆಯಾ? ನಿನ್ನ ಸಲುವಾಗಿ ನಿನ್ನ ಸಖಿಯರೂ, ನಿನ್ನ ಓರಿಗೆಯವರೂ ಅಗ್ನಿಕಾಷ್ಠ ಭಕ್ಷಣ ಮಾಡಿ ಇಷ್ಟು ಹೊತ್ತಿಗೆ ಭಸ್ಮೀಭೂತರಾಗಿ ಹೋಗಿರಬಹುದು; ಆದರೆ ನೀನು ಮಾತ್ರ ಮೋರೆಗೆ ಸೆರಗು ಹಾಕಿ ಪ್ರಲಾಪಿಸತೊಡಗಿರುವೆ. ಕುಲಕಲಂಕಿನಿ! ಇದೇ ನಿನ್ನ ಶೀಲವೇನು?"

ಈ ಗರ್ಜನೆಯನ್ನು ಕೇಳಿ ಕನಕಲತೆಯು ಬೆಚ್ಚಿಬಿದ್ದು ತಿರುಗಿ ನೋಡಿದಳು; ತಂದೆಯಾದ ಪರ್ವತಸಿಂಹನು ಸಂತಪ್ತನಾಗಿ ಬಿರುನುಡಿಗಳ ಸುರಿಮಳೆ ಸುರಿಸತೊಡ

ಗಿದ್ದನು. ಈ ಘಟನೆಯಿಂದ ಅವಳು ಕುಳಿತ ಸ್ಥಳದಿಂದೆದ್ದು ಹೋಗಿ ತಂದೆಯವರ ಚರಣಗಳ ಮೇಲೆ ಮಸ್ತಕವಿರಿಸಿ:-'ಪಿತಾಜೀ! ಈ ನಿಮ್ಮ ಕುಮಾರಿಯು ಅಸಾಹಸಿನಿಯಲ್ಲ; ಕುಲಕಲಂಕಿನಿಯಲ್ಲ. ದೀರ್ಘ ಸಾಹಸಿಯೂ ಕುಲಭೂಷಿತಳೂ ಇರುವಳು.'

"ಅಂತೆಯೇ ಜೋಹಾರವ್ರತವನ್ನಂಗೀಕರಿಸಲಿಕ್ಕೆ ಅಂಜಿ, ಅಡಗಿಕೊಂಡು, ರೋದನ ಮಾಡುತ್ತಿರುವಳು!'' ಎಂದು ಪರ್ವತಸಿಂಹನು ನುಡಿದು, ಕಠೋರವಾಣಿಯಿಂದ—"ಕುಲಾಂಗಾರಳೆ, ನಿನ್ನ ಭಗಿನಿಯರಾದ ಸಾವಿರಾರು ಕುಲವಧುಗಳು ಅಗ್ನಿಯಲ್ಲಿ ದುಮುಕಿದ್ದನ್ನು ನೋಡಿಯಾದರೂ ನಿನಗೆ ನಾಚಿಕೆ ಬರಲಿಲ್ಲವೇ? ಜೀವಗಳ್ಳಳಾಗಿ ಅಡಗಿ ಕುಳಿತು, ಮೇಲೆ ದೀರ್ಘಸಾಹಸಿನಿಯೆಂದು ಜಂಬದ ಮಾತಾಡುವೆಯಾ?'

''ಅಪ್ಪಾ, ಅಪ್ಪಾ! ನೀವು ಹೀಗೆ ವಿಕಲ್ಪ ಭಾವಿಸ—''

''ಥೂ! ದುಷ್ಟೇ! ಹೆಚ್ಚು ಮಾತಾಡಿ ನನ್ನನ್ನು ಸಿಟ್ಟಿಗೆಬ್ಬಿಸಬೇಡ! ಹೋಗು, ಇನ್ನೂ ಚಿತೆಯು ಧಗಧಗಿಸಿ ಉರಿಯುತ್ತಲಿರುವದು. ನೀನು ಅದರಲ್ಲಿ ದುಮುಕಿ ದೇಹವನ್ನು ಭಸ್ಮಮಾಡಿ ನನ್ನನ್ನು ಆನಂದಗೊಳಿಸು! ಹೂ! ಏಳು ಬೇಗನೆ, ಏಳು!"

''ಅಪ್ಪಾ, ನಾನು ಮರಣಕ್ಕೆ ಸಿದ್ಧಳಿರುವೆನು. ಮೃತ್ಯುವಿಗೆ ನಾನು ತಿಲಾಂಶವಾದರೂ ಅಂಜುವದಿಲ್ಲ. ನಾನು ಸಾಯುವೆನು; ಆದರೆ—''

''ಆದರೆ ಏಕೆ? ನೀನು ಈಗಲೆ ಸಾಯುವದಕ್ಕೆ ಸಿದ್ಧಳಿಲ್ಲ; ಪರಮಾತ್ಮನು ಸಾವು ತಂದಾಗ ಸಾಯುವವಳಲ್ಲವೆ? ನನ್ನ ವಂಶಕ್ಕೆ ಹಾಗು ನನ್ನ ಕೀರ್ತಿಗೆ ಕಲಂಕ ಹಚ್ಚುವದಕ್ಕಾಗಿಯೂ, ರಜಪುತರ ಗೌರವಾನ್ವಿತ ಚರಿತ್ರವನ್ನೂ ಇತಿಹಾಸವನ್ನೂ ಅಪ್ರತಿಷ್ಠೆಗೊಳಿಸುವದಕ್ಕಾಗಿಯೂ ನೀನು ಜೀವಿಸಿರಬೇಕಲ್ಲವೆ?"

"ಅಪ್ಪಾ, ನೀವು ಇಂಥ ಕೀಳು ನುಡಿಗಳನ್ನಾಡಬೇಡಿರಿ. ಈ ನಿಮ್ಮ ಕುಮಾರಿಯು ಕುಲಾಂಗಾರಳಲ್ಲ; ಇವಳು ನಿಮ್ಮ ಹಾಗು ನಿಮ್ಮ ವಂಶದ ಗೌರವವನ್ನು ಹೆಚ್ಚು ಮಾಡಲಿಕ್ಕೂ ರಜಪುತರ ದಿವ್ಯ ಕೀರ್ತಿಯನ್ನು ದ್ವಿಗುಣಿತಗೊಳಿಸಲಿಕ್ಕೂ ಬಾಳಬೇಕೆಂದಿರುವಳು. ಅಪ್ಪಾ, ನಾನು ಜೀವದ ವ್ಯಾಮೋಹದಿಂದ ಬದುಕಿಲ್ಲ; ಒಂದು ಮಹತ್ಕಾರ್ಯ ಸಾಧಿಸುವ ಸಾಹಸ ಮಾಡಬೇಕೆಂದು-ಬದುಕಿರುವೆನು. ನಾನು ಜೀವದಿಂದಿರುವದು ನಿಮ್ಮ ಮನಸ್ಸಿಗೆ ಬರದಿದ್ದರೆ ಈಗಲೆ ನನ್ನ ಶಿರಚ್ಛೇದ ಮಾಡಿರಿ!''

ಕನಕಲತೆಯು ಹೀಗೆ ನುಡಿದು, ತಂದೆಯ ಎದುರಿಗೆ ಶಿರಬಾಗಿ ನಿಂತಳು. ಪರ್ವತಸಿಂಹನು ಅವಳನ್ನು ನೂಕಿ—'ಕುಲಕಲಂಕಿನಿ, ಈಗ ನನ್ನ ಮುರುವತ್ತಿಗೆ ಬಿದ್ದು ಸಾಯಬೇಕೆಂದು ಆಗ್ರಹಗೊಂಡೆಯಲ್ಲವೆ? ನಿನಗೆ ಸಾವು ಬೇಕಾಗಿದ್ದರೆ ಅದು ನನ್ನ ಕೈಯಿಂದಲೆ ಏಕೆ ಬೇಕಾಗಿತ್ತು? ದುರ್ಗದ ಬೈಲಲ್ಲಿ ಇನ್ನೂ ಚಿತೆಯು ಉರಿಯುತ್ತಲಿರುವದು. ಅದರಲ್ಲಿ ಹಾರಲಿಕ್ಕೆ ನಿನಗೆ ಬರುವದಿಲ್ಲವೇ? ಹೋಗು, ನಾನು ನಿನಗೆ ಏನೂ ಹೇಳುವದಿಲ್ಲ; ನಿನ್ನ ಮುಖವನ್ನೂ ನೋಡಲಿಚ್ಛಿಸುವದಿಲ್ಲ. ನನ್ನ ಕಣ್ಣು ಮರೆಯಾಗಿ ಎಲ್ಲಿಯಾದರೂ ಹೊರಟು ಹೋಗಿ, ನಾಚಿಗೆಗೇಡಿಯಾಗಿ ಬಾಳು.'

ಕನಕಲತೆಯು ದೀನವಾಣಿಯಿಂದ-''ನನ್ನ ಪ್ರಾರ್ಥನೆಯನ್ನಾದರೂ ಕೇಳಿರಿ.

ನಾನು ಜೀವಿಸಬೇಕೆಂದು ಏಕೆ ಇಚ್ಛಿಸುವೆನೆಂಬದನ್ನು—''

''ಹಾ! ಇನ್ನೂ ನೀನು ಜೀವಿಸಿರುವ ಇಚ್ಛೆಯನ್ನೇ ತೋರಿಸುವೆಯಾ! ದುಷ್ಟೆ! ಕುಲಾಂಗಾರಳೆ!—'' ಎಂದು ಪರ್ವತಸಿಂಹನು ರೋಷದಿಂದ ನುಡಿದು, ಖಡ್ಗವನ್ನು ಹಿರಿದು, ತನ್ನೆದುರಿಗೆ ಬಾಗಿ ನಿಂತ ಕನಕಲತೆಯ ಮಸ್ತಕವನ್ನು ಹಾರಿಸಬೇಕೆಂದು ಕೈ ಎತ್ತಿದನು. ಅಷ್ಟರಲ್ಲಿ ಅವನ ಕರಾಲ ಖಡ್ಗವು ಮೇಲೆಯೇ ಸ್ತಂಭಿತವಾಯಿತು! ಪರಕ್ಷಣದಲ್ಲಿ-"ತಂದೆಯೆ!" ಎಂಬ ಧ್ವನಿಯೂ ಕೇಳಿಸಿತು. ಕೂಡಲೆ ಪರ್ವತಸಿಂಹನು ಬೆರಗಾಗಿ, ತಿರುಗಿ ನೋಡಿ—"ಕುಮಾರಾ, ಸತ್ಯೇಂದ್ರಾ!"

'ಅಪ್ಪಾ, ಇದೇನು ನಡೆಯಿಸಿರುವಿರಿ?' ''ಇವಳ ಕೊಲೆ!'' 'ಅದೇಕೆ?'

'ಇವಳು ಮರಣಕ್ಕೆ ಅಂಜಿ ಜೀವವುಳಿಸಿಕೊಳ್ಳಬೇಕೆಂದು ಯೋಚಿಸಿರುವಳು.'

ಕನಕಲತೆಯು ಧಾವಿಸಿ ಬಂದು ಅಣ್ಣನ ಕೊರಳಿಗೆ ಬಿದ್ದು ರೋದಿಸುತ್ತ:— "ನಾನು ಮೃತ್ಯುವಿಗೆ ಅಂಜುವದಿಲ್ಲ; ಆದರೆ ನಾನು ಸಾಯುವದಾದರೆ...........''

''ತಂದೆಯವರೇ, ಇವಳು ಹೇಳುವದನ್ನು ಕೇಳಿರಿ" ಎಂದು ಸತ್ಯೇಂದ್ರನು ತಂದೆಗೆ ನುಡಿದು:—"ತಂಗೀ, ನಿನ್ನ ಅಭಿಪ್ರಾಯವೇನು?"

''ಅಹಮ್ಮದಶಹನ ಕೊಲೆ ಮಾಡಿಯೇ ಸಾಯುವೆನು. ನಮ್ಮ ವಂಶನಾಶ ಮಾಡುವವನೂ, ನಮ್ಮ ಹೋಡೀ ರಾಜ್ಯವನ್ನು-ವಿಧ್ವಂಸಗೊಳಿಸುವವನೂ ಆದ ದುಷ್ಟಖಾನನನ್ನು ಯಮಸದನಕ್ಕಟ್ಟಿದ ಮೇಲೆ ನಾನು ಸಂತೋಷದಿಂದ ಸಾಯುವೆನು.'

"ಕೇಳಿದೆಯಾ ಸತ್ಯೇಂದ್ರಾ? ಇವಳು ತನ್ನ ಜೀವವನ್ನು ಉಳಿಸಿಕೊಳ್ಳುವ ದಕ್ಕಾಗಿ ಹೀಗೆ ಹೇಳುತ್ತಿರುವಳು. ಇವಳ ಕೈಯಿಂದ ಇವಳ ಕೋಮಲ ಬಾಹುಗಳಿಂದ ಇದುವರೆಗೆ ಯಾವ-ಸಾಹಸದ ಕೃತ್ಯಗಳೂ ಘಟಿಸಿಲ್ಲ. ಇವಳಿಗೆ ಶಸ್ತ್ರಸಹ ಹಿಡಿದು ಗೊತ್ತಿಲ್ಲ; ಸಮರ ಕೌಶಲ್ಯವಂತೂ ಇವಳಲ್ಲಿ ಇಲ್ಲವೇ ಇಲ್ಲ. ಇಂಥವಳಿಂದ ಬಲಾಢ್ಯನಾದ ಅಹಮ್ಮದಶಹನ ಕೊಲೆ ಮಾಡುವದು ಹೇಗೆ ತಾನೆ ಈಡೇರಬಹುದು?"

''ಪಿತಾಜೀ, ನಾನು ಈ ಕಾರ್ಯವನ್ನು ನಿಸ್ಸಂದೇಹವಾಗಿ ಈಡೇರಿಸುವೆನು. ಈ ಕಾರ್ಯವು ನನ್ನಿಂದ ಕೊನೆಗಾಣುವದೆಂದು ಆತ್ಮವಿಶ್ವಾಸವಿದ್ದುದರಿಂದಲೇ ಆತ್ಮರಕ್ಷಣೆ ಮಾಡಿಕೊಳ್ಳಬೇಕೆಂದು ಯೋಚಿಸಿರುವೆನು. ಸರ್ವನಾಶಕನಾದ ಅಹಮ್ಮದ ಶಹನ ಸೇಡು ತೀರಿಸಿಕೊಂಡು, ನಾನು ಅದೇಕ್ಷಣದಲ್ಲಿ ಆತ್ಮತ್ಯಾಗ ಮಾಡುವೆನು. ಪಿತಾಜೀ, ಸೇಡೇ ನನ್ನ ಹೆಗ್ಗುರಿ!''

'ನಿನ್ನ ಮಾತಿನಲ್ಲಿ ನನಗೆ ನಂಬಿಗೆಯಾಗಲೊಲ್ಲದು.' ಎಂದು ಪರ್ವತಸಿಂಹನು ನುಡಿದು, ಮಗನನ್ನು ಕುರಿತು—"ಸತ್ಯೇಂದ್ರಾ, ಇವಳು ಹೇಳುತ್ತಿರುವಂತೆ ಕೃತಿಯು ಘಟಿಸಬಹುದೆ? ಅಹಮ್ಮದಶಹನ ಕೊಲೆಯಂಥ ದೊಡ್ಡ ಕಾರ್ಯವು ಯ�ಃಕಶ್ಚಿತಳಾದ ಇವಳಿಂದ ಈಡೇರಬಹುದೆ?''

''ಅಪ್ಪಾ, ಇವಳು ಕೆಲವು ದಿನಗಳಹಿಂದೆ ನನ್ನೆದುರಿಗೆ ಇದರಂತ ಪ್ರತಿಜ್ಞೆ ಮಾಡಿರುವಳು.'' 'ಹೀಗೆಯೋ? ಯಾವಾಗ?' 'ಯುದ್ಧಾರಂಭದಲ್ಲಿ.'

ಸತ್ಯೇಂದ್ರನು ಹೀಗೆ ನುಡಿಯುವಷ್ಟರಲ್ಲಿ ಮಂಜುಳೆಯು ಅಲ್ಲಿಗೆ ಬಂದು ಕೈಜೋಡಿಸಿ:—"ಮಹಾರಾಜರೇ, ನೀವು ಈ ಕನಕಲತೆಯ ಛಲನೆ ನೋಡಬೇಡಿರಿ. ಇವಳು ನಿಮ್ಮ ಕಣ್ಣಿಗೆ ಅಸಾಹಸಿನಿಯಾಗಿ ಕಾಣುತ್ತಿದ್ದರೂ ದೀರ್ಘ ಸಾಹಸಿಯಿರುವಳು. ಇವಳು ತನ್ನ ಆರಾಧ್ಯದೇವತೆಯಾದ ಸಿಂಹವಾಹಿನೀ ಅಷ್ಟಭುಜಾದೇವಿಯನ್ನು ಆರಾಧಿಸಿ, ಸ್ವಪ್ನ ಸಾಕ್ಷಾತ್ಕಾರ ಹೊಂದಿರುವಳು. ಅಹಮ್ಮದಶಹನ ಕೊಲೆಯು ಇವಳಿಂದಲೇ ನೆರವೇರುವದು. ಇವಳು ನಾಳಿನ ಸರ್ವನಾಶದ ಸೇಡನ್ನು ವಿಲಕ್ಷಣವಾದ ರೀತಿಯಿಂದ ತೀರಿಸಿಕೊಳ್ಳುವಳು. ನೀವು ಇವಳ ವಿಷಯಕ್ಕೆ ಸಂದೇಹಗೊಳ್ಳಬೇಡಿರಿ. ಮುಂದಿನ ಸಾಹಸದ ಕಾರ್ಯದಲ್ಲಿ ನನ್ನನ್ನು ನೆರವಿಗೆ ತೆಗೆದುಕೊಳ್ಳಬೇಕೆಂದು ಇವಳಿಗೆ ಜಗನ್ಮಾತೆಯ ಆಜ್ಞೆಯಾಗಿರುವದು. ಅಂತೆಯೆ ನಾವಿಬ್ಬರು ಜೋಹಾರ ವ್ರತವನ್ನಂಗೀಕರಿಸದೆ ಬಾಳಿಕೊಂಡಿರುವೆವು. ನಮಗೆ ಜೀವಿತವೆಂದರೆ, ತೃಣಸಮಾನವು! ಕೇವಲ ಜೀವದ ವ್ಯಾಮೋಹದಿಂದ ನಾವು ಬದುಕಿಲ್ಲ. ಸೇಡೇನಮ್ಮ ಹೆಗ್ಗುರಿಯಾಗಿರುವದು."

ಮಂಜುಳೆಯ ಮಾತುಗಳನ್ನು ಕೇಳಿ ಪರ್ವತಸಿಂಹನಿಗೆ ಸೋಜಿಗವೂ ಸಂಭ್ರಮವೂ ಆಯಿತು. ಅವನು ಪ್ರೇಮಭರದಿಂದ ಮಗಳನ್ನು ಅಪ್ಪಿಕೊಂಡು—"ಕನಕಲತೆ, ನಾನು ನಿನ್ನ ಸಲುವಾಗಿ ವಿಕಲ್ಪ ಭಾವಿಸಿದ್ದೆನು. ನಿನ್ನ ಮನಸ್ಸಿನ ಕಾಮನೆಯು ಜಗದಂಬೆಯ ಅನುಗ್ರಹದಿಂದ ಪೂರ್ಣವಾಗುವದೆಂದು ನನಗೆ ನಂಬಿಗೆಯಾಯಿತು. ಕುಮಾರಿ, ನೀನು ಕುಲಕಲಂಕಿನಿಯಲ್ಲ; ಕುಲಭೂಷಿತಳಾಗಿರುವೆ."

"ಅಪ್ಪಾ, ನಾಳಿನ ಯುದ್ಧದಲ್ಲಿ ನಾವು ಸಮರಭೂಮಿಗೆ ಬಂದು ನಮ್ಮ ಕಾರ್ಯವನ್ನು ಈಡೇರಿಸುವದಕ್ಕೆ ಸಾಹಸ ಮಾಡುವೆವು. ಒಂದು ವೇಳೆ ಅದು ನಾಳಿಗೆ ನೆರವೇರದಿದ್ದರೆ ಜೀವವನ್ನು ಉಳಿಸಿಕೊಂಡು, ವಿಲಕ್ಷಣ ಕಾರಸ್ಥಾನವನ್ನು ರಚಿಸಿ, ಶಹನ ಅಸುವನ್ನು ಹೀರಿ, ನಾವು ಮರಣ ಹೊಂದುವೆವು." ಎಂದು ಕನಕಲತೆಯು ನುಡಿದ ಕೂಡಲೆ ಮಂಜುಳೆಯು ಪರ್ವತಸಿಂಹನ ಕಿವಿಯಲ್ಲಿ ಏನನ್ನೋ ಹೇಳಿದಳು. ಅವಳ ಮಾತು ಕೇಳಿದೊಡನೆಯೆ ಪರ್ವತಸಿಂಹನ ಮುಖವು ಆನಂದಮಯವಾಯಿತು. ಆಗ ಸತ್ಯೇಂದ್ರನು ಬೆರಗಾಗಿ—"ತಂದೆಯವರೆ, ಏನದು, ಕಿವಿಮಾತು?"

"ಅಹಮ್ಮದಶಹನ ಸೇಡನ್ನು ವಿಲಕ್ಷಣವಾದ ರೀತಿಯಿಂದ ತೀರಿಸಿಕೊಳ್ಳಲಿಕ್ಕೆ ನಡೆಯಿಸಬೇಕೆಂದಿರುವ ಕಾರಸ್ಥಾನವನ್ನು ಮಂಜುಳೆಯು ತಿಳಿಸಿದಳು. ನಾನು ನಿನಗೆ ಆ ವಿಲಕ್ಷಣ ಕಾರಸ್ಥಾನದ ವೃತ್ತಾಂತವನ್ನು ಯಥಾವಕಾಶವಾಗಿ ಹೇಳುವೆನು."

ಅಷ್ಟರಲ್ಲಿ—"ಯುದ್ಧಕ್ಕೆ ಸಿದ್ಧರಾಗಿರಿ, ಯುದ್ಧಕ್ಕೆ ಸಿದ್ಧರಾಗಿರಿ!" ಎಂಬ ಧ್ವನಿಯು ಕೇಳಿಸಿತು.

ಕೂಡಲೆ ಪರ್ವತಸಿಂಹನು—"ಸತ್ಯೇಂದ್ರಾ, ನಡೆ. ಕನಕಲತೆ-ಮಂಜುಳೆಯರೇ, ನೀವು ಬೇಗನೆ ಪುರುಷ ವೇಷವನ್ನು ಧರಿಸಿ ಸತ್ಯೇಂದ್ರನ ಜೊತೆಗೆ ರಣಭೂಮಿಗೆ ನಡೆಯಿರಿ."

———

## ಸರ್ವ ನಾಶ!

ಆಹೋರದ ದುರ್ಗದಲ್ಲಿ ವಿಚಿತ್ರವಾದ ದೃಶ್ಯವು ಕಾಣುತಲಿತ್ತು. ರಾಜಪುತಾನಿಯರು ತಮ್ಮ ಬಾಲೆಯರೊಡನೆ ಚಿತಾಪ್ರವೇಶ ಮಾಡಿ ಭಸ್ಮೀಭೂತರಾಗಿದ್ದರು. ವೀರವರ ಯೋಧಕ್ಷತ್ರಿಯರು ಕೇಶರೀ ವಸ್ತ್ರಗಳನ್ನು ಧರಿಸಿ, ರಣಸ್ಥಳದಲ್ಲಿ ಆತ್ಮಬಲಿದಾನ ಮಾಡಲಿಕ್ಕೆ ಉತ್ಸುಕರಾಗಿ ನಿಂತಿದ್ದರು. ಅವರು ಒಳ್ಳೆಯ ಆತುರತೆಯಿಂದ ಸೂರ್ಯ ಭಗವಾನನ ಮಾರ್ಗನಿರೀಕ್ಷಣೆ ಮಾಡುತಲಿದ್ದರು.

ಮಂಗಲಪ್ರಭಾತ ಸಮುಯವು. ದಿವಾಕರನಿನ್ನೂ ಉದಯಿಸಿರಲಿಲ್ಲ. ಪ್ರಾಚ್ಯ ದಿಶೆಯು ಆರಕ್ತವರ್ಣ ಹೊಂದಿತ್ತು. ಈ ಸಮಯದಲ್ಲಿ ವೀರ ರಜಪುತರು ಶಸ್ತ್ರಾಸ್ತ್ರ ಸುಸಜ್ಜಿತರಾಗಿ ಆಹೋರದುರ್ಗದ ಮಹಾದ್ವಾರದ ಬಳಿಯಲ್ಲಿ ಬಂದರು. ಅಲ್ಲಿ ಜನರು ಬಾಗಿಲು ತೆರೆಯುವ ದಾರಿಯನ್ನು ನೋಡಹತ್ತಿದರು. ಮಹಾಸೇನಾಪತಿಯಾದ ಮಾನಸಿಂಹನ ಹಾಗು ಪರ್ವತಸಿಂಹ-ಸತ್ಯೇಂದ್ರಸಿಂಹ-ಮಧುರಸಿಂಹ ಮೊದಲಾದ ರಾಜಪರಿವಾರದ ಜನರ ಆಗಮನವಾಗಿದ್ದಿಲ್ಲ. ಯಾವಾಗ ರಾಜಪರಿವಾರವು ಬರುವದೋ, ಯಾವಾಗ ದುರ್ಗದ್ವಾರವು ತೆರೆಯುವದೋ, ಯಾವಾಗ ಯವನರೊಡನೆ ಕೈಗೊಟ್ಟು ಕಾದುವೆವೋ, ಯಾವಾಗ ಹೊಡೆದು ಕೀರ್ತಿಯನ್ನಾಗಲಿ, ಮಡಿದು ವೀರಗತಿಯನ್ನಾಗಲಿ ಹೊಂದುವೆವೋ ಎಂದು ಅವರು ಆತುರಗೊಂಡಿದ್ದರು. ಅಷ್ಟರಲ್ಲಿ ರಾಜಪರಿವಾರವು ಬಂದಿತು. ಪರ್ವತಸಿಂಹನು ತನ್ನ ಸೈನಿಕರನ್ನೂ ಸರದಾರರನ್ನೂ ಕುರಿತು-"ನನ್ನ ಏಕನಿಷ್ಠ ಪ್ರಜಾಜನರೆ, ಸರದಾರ-ಸೇನಾಪತಿಗಳೆ, ಸೈನಿಕರೆ, ಇಂದೇ ನಮ್ಮ ಇಹಲೋಕದ ಅಂತಿಮ ಮಿಲನವು. ಮಹಾದ್ವಾರವನ್ನು ತೆರೆದು ಬಿಡಿರಿ!" ಎಂದು ಉಚ್ಚಕಂಠದಿಂದ ಕೂಗಿದನು. ದ್ವಾರವು ತೆರೆಯಲ್ಪಟ್ಟಿತು. ಕೂಡಲೆ ರಜಪುತ ವೀರರು "ಜಯ ಏಕಲಿಂಗಜಿ! ಜಯ ಭಾರತಮಾತೆ!" ಎಂದು ಗಂಭೀರಧ್ವನಿಯಿಂದ ಜಯ-ಜಯಕಾರ ಮಾಡಿ ಹೊರಬಿದ್ದರು. ಸೈನ್ಯದ ಒಂದು ಕಡೆಗೆ ಪರ್ವತಸಿಂಹನೂ, ಮತ್ತೊಂದು ಕಡೆಗೆ ಮಾನಸಿಂಹನೂ, ಮುಂಭಾಗದಲ್ಲಿ ಸತ್ಯೇಂದ್ರಸಿಂಹ-ಮಧುರಸಿಂಹರೂ, ಅವರ ಬಳಿಯಲ್ಲಿಯೆ ಮಂಜುಳೆ-ಕನಕಲತೆಯರೂ ಅಶ್ವಾರೋಹಿಗಳಾಗಿ ಸಾಗಿದ್ದರು. ರಜಪುತ ಪಡೆಯು ವಿದ್ಯುದ್ವೇಗದಿಂದ ಯವನ ಸೇನಾಸಾಗರದ ಮೇಲೆ ಬಿತ್ತು. ಜೀವವನ್ನು ತೃಣಸಮಾನವೆಂದು ಕಲ್ಪಿಸಿ, ಇಹಲೋಕದ ಆಶೆಯನ್ನು ಬಿಟ್ಟು ಕಾದ ತೊಡಗಿದ ರಜಪುತರ ವೀರಾವೇಶಕ್ಕೆ ಯವನರ ಪಡೆಯು ಬೆದರಿತು. ಕೆಲವು ಹೊತ್ತಿನ ವರೆಗೆ ಯವನ ಸೈನ್ಯದಲ್ಲುಂಟಾದ ಕೋಲಾಹಲವನ್ನು ಬಣ್ಣಿಸಲಳವಲ್ಲ. ಒಬ್ಬೊಬ್ಬ ರಜಪುತನು ಕನಿಷ್ಠಪಕ್ಷಕ್ಕೆ ಹತ್ತು ಜನ ಪ್ರತಿಪಕ್ಷಿಗಳ ಪ್ರಾಣ ತೆಗೆಯದೆ ಭೂಮಿಗೆ ಬೀಳುತ್ತಿದ್ದಿಲ್ಲ. ಈ ಮೇರೆಗೆ ತುಮುಲವಾದ ಯುದ್ಧವು ಒಂದು ಪ್ರಹರದ ವರೆಗೆ ನಡೆಯಿತು. ರಜಪುತರ ಭೀಷಣ ಆಕ್ರಮಣದಿಂದ ಶಾಹೀಸೇನೆಯು ಚದರುವ ಹವಣಿಕೆಯಲ್ಲಿತ್ತು. ಆಗ ಅಹಮ್ಮದಶಹನು ಗಜಾರೋಹಿಯಾಗಿ ತನ್ನ ಸೈನ್ಯಕ್ಕೆ ಪ್ರೋತ್ಸಾಹ ಕೊಡುತ್ತ ಮುಂದೆ ಬಂದನು.

ಯುವರಾಜ ಸತ್ಯೇಂದ್ರಸಿಂಹನು ಬಾದಶಹನನ್ನು ಹುಡುಕುತ್ತ ಕೆಲವು ಸೈನಿಕರೊಡನೆ ಯವನ ಸೇನೆಯ ಮಧ್ಯದಲ್ಲಿ ಪ್ರವೇಶಿಸಿದ್ದನು. ಅಷ್ಟರಲ್ಲಿ ಗಜಾರೋಹಿಯಾಗಿ ಬರುವ ಶಹನು ಅವನ ದೃಷ್ಟಿಗೆ ಬಿದ್ದನು. ಕೂಡಲೆ ಅವನು ಕೆರಳಿದ ಕೇಸರಿಯಂತೆ ರಭಸದಿಂಡ ಮುಂದೆ ಬಿದ್ದನು. ಎದುರಾದ ಯವನರು ಅವನ ಖಡ್ಗಾಘಾತದಿಂದ ಭೂಮಿಗೆ ಬೀಳತೊಡಗಿದರು. ಅವನು ಅಹಮ್ಮದಶಹನ ಆನೆಯ ಸಮೀಪಕ್ಕೆ ಹೋದವನೇ ಅದರ ರೇಶಿಮೆಯ ನಡುಪಟ್ಟಿಯನ್ನು ಕೊಯ್ದನು. ಕೂಡಲೆ ಅಂಬಾರಿಸಹಿತವಾಗಿ ಬಾದಶಹನು ಭೂಮಿಗೆ ಬಿದ್ದನು. ಕೂಡಲೆ ರಜಪುತ ಸೈನ್ಯದಲ್ಲಿ ಜಯಜಯಕಾರ ಧ್ವನಿಯೂ ಯವನ ಸೈನ್ಯದಲ್ಲಿ ಚೀತ್ಕಾರಧ್ವನಿಯೂ ಹೊರಡತೊಡಗಿದವು. ಸತ್ಯೇಂದ್ರಸಿಂಹನು ವಿದ್ಯುದ್ಗತಿಯಿಂದ ಸಾಗಿ ಅಹಮ್ಮದಶಹನ ಮಸ್ತಕಕ್ಕೆ ಗುರಿಯಿಟ್ಟು ಖಡ್ಗವನ್ನೆಸೆದನು. ಆ ಪೆಟ್ಟು ಅಂಬಾರಿಯ ಸ್ತಂಭಕ್ಕೆ ಬಡಿದುದರಿಂದ ಖಡ್ಗವು ಮುರಿದುಹೋಯಿತು! ಶಹನು ಬದುಕಿದನು. ಎರಡನೆಯ ಕ್ಷಣದಲ್ಲಿ ಒಬ್ಬ ತರುಣನು ಅಲ್ಲಿಗೆ ಬಂದು—"ಅಣ್ಣಾ, ಸತ್ಯೇಂದ್ರಸಿಂಹ, ಈ ಖಡ್ಗವನ್ನು ತೆಗೆದುಕೊಂಡು ಶೀಘ್ರವಾಗಿ ಶಹನನ್ನು ಸಂಹರಿಸಿರಿ!" ಎಂದು ಹೇಳಿ ಸತ್ಯೇಂದ್ರನಿಗೆ ಖಡ್ಗವನ್ನು ಕೊಟ್ಟನು. ಸತ್ಯೇಂದ್ರನು ಖಡ್ಗವನ್ನು ತೆಗೆದುಕೊಂಡು: 'ಯಾರು? ಭಗಿನಿ—' ಎಂದು ನುಡಿಯುತ್ತಲೆ ನಾಲಿಗೆ ಕಚ್ಚಿಕೊಂಡು, ಶಹನನ್ನು ಹೊಡೆಯಲಿಕ್ಕೆ ಮುಂದೆ ಬಿದ್ದನು. ಇಷ್ಟು ಅವಧಿಯಲ್ಲಿ ಅಹಮ್ಮದಶಹನು ಬಿದ್ದ ಸ್ಥಳದಿಂದೆದ್ದು ತನ್ನ ಸೈನ್ಯದ ಮಧ್ಯಭಾಗದಲ್ಲಿ ಓಡಿಹೋಗಿದ್ದನು. ಕೈಯಲ್ಲಿ ಸಿಕ್ಕ ಬೇಟೆಯು ನುಸುಳಿ ಹೋದದ್ದರಿಂದ ಸತ್ಯೇಂದ್ರಸಿಂಹನು ಮತ್ತಿಷ್ಟು ಕೆರಳಿ, ಯವನ ಸೇನೆಯನ್ನು ಕಡಿದು ಚಲ್ಲುತ್ತ ಶಹನನ್ನು ಹುಡುಕಹತ್ತಿದನು.

ಅಹಮ್ಮದಶಹನು ಓಡಿಹೋಗಿ ಜೀವವುಳಿಸಿಕೊಂಡು, ಅಶ್ವಾರೋಹಿಯಾಗಿ ಚದರಿದ ಸೈನ್ಯವನ್ನು ಒಬ್ಬುಳಿ ಮಾಡತೊಡಗಿದನು. ಅವನು ಸ್ಫೂರ್ತಿಪ್ರದ ಭಾಷಣದಿಂದ ಅದನ್ನು ಉತ್ಸಾಹಗೊಳಿಸುತ್ತಲಿದ್ದನು. ಅಷ್ಟರಲ್ಲಿ ಒಂದು ಬಾಣವು ಸುಯ್ ಗುಟ್ಟುತ್ತ ಬಂದಿತು. ಶಹನ ಕುದುರೆಯು ಅದೇ ವೇಳೆಯಲ್ಲಿ ಮುಖವನ್ನೆತ್ತಿದ್ದರಿಂದ ಆ ಬಾಣವು ಕುದುರೆಗೆ ತಗಲಿ ಭೂಮಿಗೆ ಬಿತ್ತು; ಅದರೊಡನೆ ಶಹನೂ ಬಿದ್ದನು. ಎಲ್ಲಿ ಹೋದರೂ ಉಳಿವಿಲ್ಲದಂತಾಯಿತೆಂದು ಅವನು ಅಳ್ಳೊಡೆದು, ಸಾವರಿಸಿಕೊಂಡೆದ್ದು ಸಂದಣಿತವಾಗಿದ್ದ ತನ್ನ ಸೇನೆಯ ಮಧ್ಯಭಾಗವನ್ನು ಸೇರಿದನು.

ಅಹಮ್ಮದಶಹನ ಮೇಲೆ ಶರಸಂಧಾನ ಮಾಡಿದವನು ಮಹಾವೀರ ಕಾರ್ಮುಕಯೋಗಸಿದ್ಧನಾದ ಮಧುರಸಿಂಹನಾಗಿದ್ದನು. ತನ್ನ ಅವ್ಯರ್ಥವಾದ ಬಾಣವು ಇಂದು ಆಕಸ್ಮಿಕ ಘಟನೆಯಿಂದ ವ್ಯರ್ಥವಾದದ್ದನ್ನು ನೋಡಿ ಖತಿಗೊಂಡು, ಧನುಸ್ಸಿಗೆ ಮತ್ತೊಂದು ಬಾಣ ಹೂಡಿದನು. ಅಷ್ಟರಲ್ಲಿ ಪುರುಷವೇಷಧಾರಿಣಿಯಾದ ಮಂಜುಳೆಯು ಅಲ್ಲಿಗೆ ಬಂದು:—"ಪ್ರಿಯ ಮಧುರಸಿಂಹ, ಶಹನು ಪಲಾಯನ ಮಾಡಿದನು. ಇಂದು ನಿಮ್ಮ ಬಾಣವು ವ್ಯರ್ಥವಾದದ್ದು ಶುಭಲಕ್ಷಣವಲ್ಲ."

"ಪ್ರಿಯ ಮಂಜುಳಾ, ದೇಹದಲ್ಲಿ ಪ್ರಾಣಸಂಚಾರವಾಗಿರುವವರೆಗೆ ನಾನು ದುಷ್ಟ ಅಹಮ್ಮದಶಹನನ್ನು ವಧೆಮಾಡಲಿಕ್ಕೆ ಸಾಹಸ ಮಾಡುವವನೇ! ನಾನು ಈ ಜನ್ಮದಲ್ಲಿ ನಿನ್ನ ಇಚ್ಛಿತ ಕಾಣಿಕೆಯಾದ ಅಹಮ್ಮದಶಹನ ಮಸ್ತಕವನ್ನು ನಿನ್ನೆದುರಿಗಿಟ್ಟು, ಮುಂದಿನ ಜನ್ಮದಲ್ಲಾದರೂ ನಿನ್ನನ್ನು ವರಿಸುವೆನು. ಭಗವಾನ್ ಏಕಲಿಂಗಜಿಯ ಸಂಕೇತವು ಹೇಗಿರುವದೋ ನೋಡೋಣ.''

ಮಧುರಸಿಂಹನು ಮಂಜುಳೆಯೊಡನೆ ಮಾತಾಡುತ್ತ ನಿಂತ ಸಂಧಿಯನ್ನು ಸಾಧಿಸಿ, ಒಬ್ಬ ಯವನನು ಅವನ ಮಸ್ತಕಕ್ಕೆ ಖಡ್ಗವನ್ನೆತ್ತಿದನು; ಆದರೆ ಆ ಯವನನ ಹಿಂದೆಯೆ ಇದ್ದ ಮತ್ತೊಂದು ವ್ಯಕ್ತಿಯು ಖಡ್ಗವೆತ್ತಿದ ಯವನನ ಕೈಗೆ ಬಲವಾಗಿ ಖಡ್ಗಾಘಾತ ಮಾಡಿತು. ಕೂಡಲೆ ಖಡ್ಗಸಹಿತವಾದ ಹಸ್ತವು ಅಂತರಿಕ್ಷದಲ್ಲಿ ಜಿಗಿದು ಮತ್ತೆ ಭೂಮಿಗೆ ಬಿತ್ತು! ಈ ದೃಶ್ಯವನ್ನು ನೋಡಿ "ಶಾಬಾಸ್! ಶಾಬಾಸ್!" ಎಂದು ಪರ್ವತಸಿಂಹನು ಧನ್ಯೋದ್ಗಾರ ತೆಗೆದನು. ಯವನನ ಹಸ್ತವನ್ನು ಕತ್ತರಿಸಿದ ವ್ಯಕ್ತಿಯು ಪರ್ವತಸಿಂಹನ ಕುಮಾರಿಯಾದ ಕನಕಲತೆಯು! ಮಗಳ ಈ ಸಾಹಸವನ್ನು ನೋಡಿ ಪರ್ವತಸಿಂಹನು ಬೆರಗಾದನು.

ಮಂಜುಳೆಯೂ ಕನಕಲತೆಯೂ ಯವನಸೇನಾಂಬುಧಿಯನ್ನು ಹೊಕ್ಕು ವೀರ ರಜಪುತರಂತೆಯೇ ಶೌರ್ಯ ತೋರಿಸತೊಡಗಿದ್ದರು. ಅಹಮ್ಮದಶಹನನ್ನು ಶೋ-ಧಿಸಿ ಅವನ ಶಿರಚ್ಛೇದ ಮಾಡಬೇಕೆಂದು ಇಬ್ಬರೂ ಸಾಹಸ ನಡೆಯಿಸಿದ್ದರು; ಆದರೆ ಅವರ ಮನೋರಥವು ಈಡೇರಲಿಲ್ಲ. ಬರಬರುತ್ತ ರಜಪುತ ಸೇನೆಯು ಸಣ್ಣದಾಗಹತ್ತಿತು. ನಿಕರವಾದ ಯುದ್ಧವು ನಡೆದಾಗ ಪರ್ವತಸಿಂಹನು ಧರಾಶಾಯಿಯಾದನು! ಈ ಘಟನೆಯಿಂದಂತು ರಜಪುತರ ಅರ್ಧ ಶಕ್ತಿಯೇ ಕಳಚಿದಂತಾಯಿತು. ಪರ್ವತಸಿಂಹನು ಮಡಿದ ಕೂಡಲೆ ಸತ್ಯೇಂದ್ರಸಿಂಹನು ಸೇನಾಧಿಪತ್ಯವನ್ನು ಸ್ವೀಕರಿಸಿದನು. ಮಾನಸಿಂಹ-ಮಧುರಸಿಂಹರು ಉಪಸೇನಾನಾಯಕರಾದರು. ಮತ್ತೆ ಕೆಲವು ಗಳಿಗೆಗಳ ವರೆಗೆ ಯುದ್ಧವು ಒಳ್ಳೆಯ ರಭಸದಿಂದ ನಡೆಯಿತು. ಅಷ್ಟರಲ್ಲಿ ಸತ್ಯೇಂದ್ರಸಿಂಹ ಮಧುರಸಿಂಹರಿಬ್ಬರೂ ಇಳೆಗುರುಳಿದರು. ಕಡೆಗೆ ಮಾನಸಿಂಹನು ಉಳಿದ ಅತ್ಯಲ್ಪ ಸೈನ್ಯದೊಡನೆ ಕಾದತೊಡಗಿದನು. ಬಾದಶಾಹೀ ಸೇನಾಂಬುಧಿಯಲ್ಲಿ ರಜಪುತ ಪಡೆಯು ಬಿಂದುವಿನೋಪಾದಿಯಲ್ಲಿ ಕಾಣತೊಡಗಿತು. ಆದರೂ ಅವರು ಶಸ್ತ್ರವನ್ನು ಕೆಳಗಿಡಲಿಲ್ಲ. ನಿಶ್ಶೇಷವಾಗುವ ವರೆಗೂ ಯುದ್ಧ ಮಾಡಬೇಕೆಂದು ಅವರ ಸತ್ಯಸಂಕಲ್ಪವಿತ್ತು.

ಇನ್ನು ಮೇಲೆ ರಜಪುತ ಸೈನ್ಯವು ಪೂರಾ ನಾಶವಾಗುವದೆಂದೂ, ತಾವೂ ಅದರಲ್ಲಿ ನಾಶವಾದರೆ ಶಹನ ಮೇಲಿನ ಸೇಡು ತೀರಿಸಿಕೊಳ್ಳುವ ಪ್ರತಿಜ್ಞೆಯು ಪೂರೈಸಲಾರದೆಂದೂ ತಿಳಿದು, ಕನಕಲತೆ-ಮಂಜುಳೆಯರು ನಾಲ್ಕೆಂಟು ಜನ ಶೂರ ಸೈನಿಕರೊಡನೆ ಹಿಂದೆ ಸರಿಯುತ್ತ ಕೋಟೆಯನ್ನು ಸೇರಿದರು. ಅವರು ದುರ್ಗದ ಮೇಲೆ ಹೋಗಿ ರಾಜಮಂದಿರ, ಧಾನ್ಯಾಗಾರ, ಅಶ್ವಶಾಲೆ, ಗಜಶಾಲೆ, ಮಂತ್ರಣಾಗಾರ,

ಮೊದಲಾದವುಗಳನ್ನೆಲ್ಲ ವಿಧ್ವಂಸ ಮಾಡಿ, ಶಹನಿಗೆ ನೋಡಿದಡಲ್ಲಿ ಸ್ಮಶಾನಸದೃಶವಾದ ನೋಟವು ಕಣ್ಣಿಗೆ ಬೀಳುವಂತೆ ಮಾಡಿದರು.

ರಜಪುತರು ಬರಬರುತ್ತ ಬೆರಳಿನಿಂದ ಎಣಿಸುವಷ್ಟು ಮಾತ್ರ ಉಳಿದರು. ಸ್ವಲ್ಪ ಹೊತ್ತಿನಲ್ಲಿಯೆ ಅವರೂ ನಾಶವಾದರು. ಯವನರು ಜಯ ಜಯಕಾರ ಧ್ವನಿ ಮಾಡುತ್ತ ಶವಗಳ ರಾಶಿಗಳನ್ನು ಹತ್ತುತ್ತ ಇಳಿಯುತ್ತ ರಭಸದಿಂದ ಕೋಟೆಯನ್ನೇರುವದಕ್ಕೆ ಧಾವಿಸಿದರು. ದಾರಿಯಲ್ಲಿ ಪರ್ವತಸಿಂಹನ ಶವವು ಬಿದ್ದಿತ್ತು. ತಲೆಯ ಮೇಲಿದ್ದ ಮುಕುಟದಲ್ಲಿಯ ಸೂರ್ಯ-ಚಂದ್ರಚಿಹ್ನಾಂಕಿತ ಛತ್ರದಿಂದ ಅದು ಪರ್ವತಸಿಂಹನ ಪ್ರೇತವೆಂದು ಯವನರಿಗೆ ನಂಬಿಕೆಯಾಯಿತು. ಅಹಮ್ಮದಶಹನು ಆ ಶವವನ್ನು ನೋಡಿದೊಡನೆಯ ರೋಷಾವೇಶದಿಂದ ಅದರ ಮಸ್ತಕದ ಮೇಲೆ ಕಾಲಿಟ್ಟು:—“ಕಾಫಿರ! ಪರ್ವತಸಿಂಹ! ಒಳ್ಳೆಯ ಮಾತಿನಿಂದ ಕನಕಲತೆಯನ್ನು ನನ್ನ ಅಧೀನಕ್ಕೆ ಕೊಟ್ಟಿದ್ದರೆ ಈ ದುರ್ದಶೆಯು ಎಲ್ಲಿ ಪ್ರಾಪ್ತವಾಗುತ್ತಿತ್ತು?” ಎಂದು ಬಡಬಡಿಸಹತ್ತಿದನು. ಅವನ ಈ ಕೃತ್ಯವನ್ನು ನೊಡಲಾರದೆ ದಿನಮಣಿಯು ಅಸ್ತಾಚಲವನ್ನು ಸೇರತೊಡಗಿದನು. ಸೂರ್ಯವಂಶೀಯ ಕ್ಷತ್ರಿಯರ ಭೀಷಣವಾದ ವಿನಾಶದ ದುಃಖದಿಂದ ಅವನ ಮುಖವು ಕೆಂಪಾಗಿ ಹೋಗಿತ್ತು.

ಶಾಹೀ ಸೇನೆಯು ವಿಜಯಾನಂದದಿಂದ ದುರ್ಗವನ್ನು ಪ್ರವೇಶಿಸಿತು. ಅಲ್ಲಿ ತಮಗೆ ಅಮೋಘವಾದ ಸಂಪತ್ತು ದೊರೆಯುವದೆಂದು ಅದು ಆಶೆಗೊಂಡಿತ್ತು. ಕನಕಲತೆಯೂ ಅಂತಃಪುರದ ಸ್ತ್ರೀಯರೂ ತನ್ನನ್ನು ಎದುರ್ಗೊಳ್ಳುವದಕ್ಕಾಗಿ ರಾಜಭುವನದ ಮಹಾದ್ವಾರದಲ್ಲಿ ಆರುತಿಯನ್ನು ಹಿಡಿದುಕೊಂಡು ನಿಂತಿರುವರೆಂದು ಅಹಮ್ಮದಶಹನು ತಿಳಿದಿದ್ದನು. ದುರ್ಗವನ್ನು ಪ್ರವೇಶಿಸಿದ ಕೂಡಲೆ ಎಲ್ಲವೂ ವಿಚಿತ್ರವೇ ಕಂಡಿತು. ದುರ್ಗದಲ್ಲಿ ಪ್ರಾಣವುಳ್ಳ ಒಂದು ಪದಾರ್ಥವೂ ಅವರ ಕಣ್ಣಿಗೆ ಬೀಳಲಿಲ್ಲ; ಗಟ್ಟಿಮುಟ್ಟಾಗಿದ್ದ ಕಟ್ಟಡಗಳೂ ಕಾಣಲಿಲ್ಲ. ಸಿರಿಸಂಪತ್ತು ದೊರೆಯುವದೊತ್ತಟ್ಟಿಗುಳಿದು, ಅವರಿಗೆ ನೋಡಿದಡಲ್ಲಿ ಹೆಣದ ಬೂದಿಗಳೂ ಎಲವುಗಳ ರಾಶಿಗಳೂ ಕಾಣಹತ್ತಿದವು. ಕೆಲವು ಕಟ್ಟಡಗಳು ಭಸ್ಮವಾಗಿ ಹೋಗಿದ್ದವು. ಕೆಲವು ಇನ್ನೂ ಉರಿಯುತಲಿದ್ದವು. ಕೆಲವು ನೊಂದಿ ನಿಗಿ ನಿಗಿ ಹೊಳೆಯುತ್ತಿದ್ದವು. ತನ್ನ ಸ್ವಾಗತವು ಸುವಾಸಿನಿಯರ ಆರುತಿಯಿಂದಾಗದೆ, ಕಟ್ಟಡಗಳ ಉರಿಯಿಂದಾಯಿತೆಂದು ಶಹನು ಖಿನ್ನನಾದನು. ಅವನು ಸೈನಿಕರಿಂದ ಕನಕಲತೆಯನ್ನು ದುರ್ಗದ ಸಂದಿಗೊಂದಿಗಳಲ್ಲಿ ಶೋಧ ಮಾಡಿಸಿದನು; ಆದರೆ ಅವಳು ಎಲ್ಲಿಯೂ ದೊರೆಯಲಿಲ್ಲ. ಉಳಿದ ರಜಪುತ ಲಲನೆಯರಂತೆ ಅವಳಾದರೂ ಜೋಹಾರ ಮಾಡಿರಬಹುದೆಂದು ತಿಳಿದು ಅವನು:—“ಸರ್ವನಾಶ! ಸರ್ವನಾಶ!!” ಎಂದು ಎದೆ ಎದೆ ಬಡಕೊಳ್ಳತೊಡಗಿದನು. ಸರ್ವನಾಶವು ರಜಪುತರದಾಗಿರದೆ, ತನ್ನದೇ ಆದಂತೆ ಅವನಿಗೆ ಭಾಸವಾಯಿತು! ಕೂಡಲೆ ಅವನು ಕುದುರೆಯ ಮೇಲಿಂದ ಬಿದ್ದು ಮೂರ್ಛಿತನಾದನು!

———

## ಉದ್ಭ್ರಾಂತ ಹೃದಯ.

ಕನಕಲತೆಯು ಜೋಹಾರ ವ್ರತವನ್ನಂಗೀಕರಿಸಿ ಸುಟ್ಟು ಹೋದದ್ದಕ್ಕಾಗಿ ಅಹಮ್ಮದಶಹನಿಗೆ ಪರಮಾವಧಿ ವ್ಯಸನವಾಯಿತು. ತಾನು ಇಷ್ಟು ಸಾಹಸ ಮಾಡಿದ್ದು ವ್ಯರ್ಥವಾಯಿತೆಂದು ದುಃಖಿಸುತ್ತ ಅವನು ರಾಜಧಾನಿಗೆ ಬಂದನು. ದುರ್ಗವು ಕೈವಶವಾದರೂ ಪ್ರಿಯ ವಸ್ತುವು ದೊರೆಯಲಿಲ್ಲವೆಂದು ಅವನು ಹೃದ್ರೋಗ ಹಚ್ಚಿಕೊಂಡನು. ಅವನು ಅನ್ನ ನೀರು ಬಿಟ್ಟನು. ಯಾವಾಗಲೂ ಕನಕಲತೆಯ ಕಲ್ಪಿತ ಮೂರ್ತಿಯನ್ನು ನಿರ್ಮಾಣ ಮಾಡಿ, ಆ ಚಿತ್ರದ ಕಡೆಗೆ ನೋಡುತ್ತ ಅವನು ದಿನ ಕಳೆಯತೊಡಗಿದನು. ಅವನು ರಾಜ್ಯಕಾರ್ಯವನ್ನು ಬಿಟ್ಟನು. ವಿಲಾಸೋಪ ಭೋಗಗಳನ್ನು ತೊರೆದನು. ಅವನ ಮನಸ್ಸು ತೀರ ವಿರಕ್ತವಾಯಿತು. ಆಯುಷ್ಯವು ಅಸಾರವಾಯಿತು. 'ಹಾಯ! ಹಾಯ!! ಇದೇನಾಯಿತು, ಇದೇನಾಯಿತು!' ಎಂದು ಅವನು ಮೇಲಿಂದ ಮೇಲೆ ದುಃಖೋದ್ಗಾರ ತೆಗೆಯತೊಡಗಿದನು. ಬರಬರುತ್ತ ಅವನು ಭ್ರಮಿಷ್ಟನಂತೆ ಆಚರಿಸಹತ್ತಿದನು.

ಅಹಮ್ಮದಶಹನು ವಿಶ್ರಾಂತಿಯ ಕೋಣೆಯಲ್ಲಿ ಚಿಂತಾಮಗ್ನನಾಗಿ ಕುಳಿತಿದ್ದನು. ಕನಕಲತೆಯ ಚಿಂತನೆಯ ಹೊರತು ಬೇರೆ ವಿಷಯವೇ ಅವನಲ್ಲಿ ಉದ್ಭವಿಸುವಂತಿದ್ದಿಲ್ಲ. ಅವನು ತನ್ನ ಮನೋಹಾರಿಣಿಯ ಮೋಹಕ ಮೂರ್ತಿಯನ್ನು ಕಲ್ಪಿಸಿಕೊಂಡು ನಿರೀಕ್ಷಿಸುತ್ತಿರುವಾಗ ಪ್ರತಿಹಾರಿಯು ಅಲ್ಲಿಗೆ ಬಂದು—"ಜಹಾಂಪನಾಹ, ರಾಜಪುತಾನಾ ವಿಭಾಗದ ಜಾಸೂದನೊಬ್ಬನು ಒಳ್ಳೆಯ ಅವಸರ ಕಾರ್ಯಕ್ಕಾಗಿ ಭೆಟ್ಟಿಯಾಗಲಿಚ್ಛಿಸುತ್ತಿರುವನು.''

'ಈಗ ನನಗೆ ಅನುಕೂಲವಿಲ್ಲ.' ಮುಹಮ್ಮದಶಹನು ತಿರಸ್ಕಾರ-ಸಂತಾಪಗಳಿಂದ ''ವೇಳೆ-ಅವೇಳೆಯಲ್ಲಿ ಯಾರಾದರೂ ಬಂದು ಹೀಗೆಯೇ ತೊಂದರೆ ಕೊಡುತ್ತಿರುವರು. ನನ್ನ ಭೆಟ್ಟಿಯನ್ನು ತೆಗೆದುಕೊಂಡು ಅವರು ಮಾಡುವದೇನು?"

ಸೇವಕನು ಹಿಂದಿರುಗಿ ಹೋಗಹತ್ತಿದ್ದನು, ಆಗ ಶಹನು ಅವನನ್ನು ಕರೆದು—''ಆ ಗುಪ್ತಚರರನ್ನು ಒಳಗೆ ಕಳಿಸಿಕೊಡು.''

ಮುಂದೆ ಸ್ವಲ್ಪ ವೇಳೆಯಲ್ಲಿ ಒಬ್ಬ ದೂತನು ಒಳಗೆ ಬಂದು, ಶಹನಿಗೆ ಕುರ್ನಿಸಾತ ಮಾಡಿ--"ಹುಜೂರ, ನಾನು ಒಂದು ಮಹತ್ವದ ವಾರ್ತೆ ತಂದಿರುವೆನು."

''ಅಂಥ ಮಹತ್ವದ ವಾರ್ತೆಯೇನು?''

"ಆ ವಾರ್ತೆಯು ನಿಮ್ಮನ್ನು ಸ್ವಾನಂದ ಸಾಮ್ರಾಜ್ಯದಲ್ಲಿ ಮುಳುಗಿಸುವಂತಹದು; ನಿಮ್ಮನ್ನು ಕೃತಕೃತ್ಯರನ್ನು ಮಾಡುವಂತಹದು. ನಿಮ್ಮ ಮನದೊಳಗಿನ ದುಗುಡನ್ನು ನಷ್ಟಗೊಳಿಸುವಂತಹದು."

"ಇದೇ ವ್ಯಾಖ್ಯಾನವು ನಡೆಯಿತಲ್ಲ. ನೀನು ಹೇಳಬೇಕೆಂದಿರುವ ವಾರ್ತೆಯನ್ನು ಹೇಳಬಾರದೆ? ಸುಮ್ಮನೆ ಯಾಕೆ ಹರಟಿ ಕೊಚ್ಚುವೆ?''

''ಹರಟಿಯಲ್ಲ, ನಿಜಸ್ಥಿತಿಯನ್ನು ತಿಳಿಸುವದಕ್ಕಾಗಿಯೇ ಬಂದಿರುವೆನು"

"ಏನು ಹೇಳಬೇಕೆಂದು ಯೋಚಿಸಿರುವೆಯೋ ಅದನ್ನು ತಟ್ಟನೆ ಹೇಳಿಬಿಡು."

"ಖಾವಿಂದರವರು ಯಾರ ಸಲುವಾಗಿ ಅಗಣಿತ ದ್ರವ್ಯವನ್ನೂ ಸಹಸ್ರಾವಧಿ ಮನುಷ್ಯರನ್ನೂ ಹಾಳುಮಾಡಿಕೊಂಡರೋ, ಆ ವರಾಂಗನೆಯು ಭೀಮಸಿಂಹನ ಆಶ್ರಯದಲ್ಲಿ ಸೇರಿರುವಳೆಂಬ ವಿಶ್ವಸನೀಯ ವಾರ್ತೆಯು ತಿಳಿದದ್ದರಿಂದ ಸನ್ನಿಧಿಗೆ ಅರಿಕೆಮಾಡಿಕೊಳ್ಳಲಿಕ್ಕೆ ಬಂದೆನು."

"ಏನು? ಕನಕಲತೆಯು ಜೀವದಿಂದಿರುವಳೇ? ಅವಳು ಸುಟ್ಟುಕೊಂಡು ಸತ್ತಿಲ್ಲವೆ? ನೀನು ಹೇಳುತ್ತಿರುವ ಸಂಗತಿಯು ನಿಜವೆ?" ಖಾನನು ವಿಸ್ಮಯದಿಂದಲೂ ಸಂಭ್ರಮದಿಂದಲೂ ಆ ಗುಪ್ತಚರನನ್ನು ಕೇಳಿದನು.

"ಹುಜೂರ, ನಾನು ಹೇಳುತ್ತಿರುವದು ನಿಜವಾದ ಸಂಗತಿಯು."

"ಪ್ರಿಯ ದೋಸ್ತ" ಅಹಮ್ಮದಶಹನು ಆನಂದಸಾಗರದಲ್ಲಿ ಮುಳುಗಿ:-"ನೀನು ಜಾಸೂದನಾದರೂ ನನ್ನ ಪರಮ ಮಿತ್ರನಾದೆ. ಅಮೃತಸಮವಾದ ವಾರ್ತೆಯನ್ನು ತಂದು ನನ್ನನ್ನು ಬದುಕಿಸಿದೆ. ನಿನ್ನ ವಾರ್ತೆಯು ಮೃತ್ಯುಪಥಕ್ಕೆ ಹತ್ತಿದವನಾದ ನನಗೆ ಸಂಜೀವಿನಿಯೇ ಆಗಿರುವದು. ತೆಗೆದುಕೋ, ಈ ರತ್ನದ ಕಂಠಾಭರಣವನ್ನು; ನಿನಗೆ ಪಾರಿತೋಷಕವಾಗಿ ಕೊಟ್ಟಿರುವೆನು."

"ಖಾವಿಂದ, ನಾನೇನು ಅಂಥ ದೊಡ್ಡ ಕಾರ್ಯ ಮಾಡಿರುವೆನೆಂದು ಇಷ್ಟು ಬೆಲೆಯುಳ್ಳ ರತ್ನಹಾರ ಕೊಡುವಿರಿ? ನಾನು ನನ್ನ ಕರ್ತವ್ಯ ಮಾಡಿರುವೆನು. ಸ್ವಾಮಿಯ ಹಿತಚಿಂತನೆ ಮಾಡುವದು ಸೇವಕನ ಕಾರ್ಯವು. ಬೇಡ, ನನಗೆ ಈ ಹಾರವು ಬೇಡ."

"ಛೇ! ನೀನು ಇದನ್ನು ತೆಗೆದುಕೊಳ್ಳಲಿಕ್ಕೇ ಬೇಕು. ನೀನು ಸಿಂಧ ಬಾದಶಹನಿಗೆ ಪುನರ್ಜನ್ಮವಿತ್ತಂತಾಗಿದೆ. ನಿನಗೆ ಅರ್ಧರಾಜ್ಯ ಕೊಟ್ಟರೂ ನಿನ್ನ ಉಪಕಾರ ತೀರದು. ಕನಕಲತೆಯನ್ನು ಕರೆತಂದು ವಿವಾಹ ಸಮಾರಂಭವನ್ನು ನೆರವೇರಿಸುವಾಗ, ನಿನಗೆ ಇನ್ನೂ ಹೆಚ್ಚಿನ ಸಂಭಾವನೆಯು ಕೊಡಲ್ಪಡುವದು. ತೆಗೆದುಕೋ, ಸದ್ಯಕ್ಕೆ ಈ ಹಾರವನ್ನು!"

ಜಾಸೂದನು ಹಾರವನ್ನು ತೆಗೆದುಕೊಂಡು ಬಾದಶಹನಿಗೆ ಮುಜುರೆ ಮಾಡಿ ಅಲ್ಲಿಂದ ಪಯಣ ಮಾಡಿದನು. ಅನಂತರ ಶಹನು ಮಹಾಮಂತ್ರಿಯಾದ ನಿಜಾಮುಉದ್ದೌಲನನ್ನು ಕರೆಯಿಸಿ:—"ಸಚಿವ ಶ್ರೇಷ್ಠರೆ, ಇಂದು ಆನಂದವಿಸ್ಮಯಜನಕವಾದ ವಾರ್ತೆಯು ತಿಳಿದಿದೆ."

'ಅದೇನು ಜಹಾಂಪನಾಹ?' ನಿಜಾಮುಉದ್ದೌಲನು ಸೋಜಿಗದಿಂದ ಕೇಳಿದನು.

'ನನ್ನ ಪ್ರಿಯಕರೆಯಾದ ಕನಕಲತೆಯು ಜೋಹಾರ ಮಾಡಿಲ್ಲ; ಅವಳು ಜೀವಂತಳಾಗಿರುವಳಂತೆ!' 'ಯಾರು ಹೇಳಿದರು?'

"ರಾಜಪುತಾನಾ ವಿಭಾಗದ ಜಾಸೂದನೊಬ್ಬನು ತಿಳಿಸಿದನು."

"ಈಗ ಅವನು ಎಲ್ಲಿರುವನು?"

"ಇದೀಗ ಅವನು ನನ್ನ ನಿರೂಪ ಹೊಂದಿ ಹೊರಟು ಹೋದನು."

"ಹುಜೂರ, ಈ ಸಂಗತಿಯು ನಿಜವಿರಬಹುದೆ?"

"ಸಂದೇಹವಿಲ್ಲ. ನನ್ನ ಏಕನಿಷ್ಠ ಸೇವಕರು ಮಿಥ್ಯಾವಾರ್ತೆಯನ್ನೇಕೆ ತಿಳಿಸುವರು?" "ಮುಂದೆ ಏನು ಮಾಡಬೇಕೆನ್ನುವಿರಿ?"

'ಮತ್ತೆ ಮನುಷ್ಯಯಜ್ಞ!' ಶಹನು ಆವೇಶಯುಕ್ತವಾಗಿ—"ವಿಶ್ವ ಪ್ರಯತ್ನ ಮಾಡಿಯಾದರೂ ಆ ಸ್ವರ್ಗೀಯ ರಮಣಿಯನ್ನು ವಶಪಡಿಸಿಕೊಳ್ಳಬೇಕು. ಕನಕಲತೆಯು ನನ್ನ ಅಂತಃಪುರವನ್ನು ಪ್ರವೇಶಿಸಿದ ಮೇಲೆಯೇ ನನ್ನ ತಳಮಳಸುವ ಹೃದಯಕ್ಕೆ ಶಾಂತಿಯು ದೊರೆಯುವದು. ಮಂತ್ರಿಗಳೆ, ಯುದ್ಧದ ಸಿದ್ಧತೆ ಮಾಡಲಿಕ್ಕೆ ಸರದಾರ-ಸೇನಾಪತಿಗಳಿಗೆ ತಿಳಿಸಿರಿ."

"ಖಾವಿಂದ, ಇದರ ವಿಷಯವಾಗಿ ವಿಶ್ವಸನೀಯ ಸಂಗತಿಯನ್ನು ತಿಳಕೊಂಡು ಕಾರ್ಯಾರಂಭ ಮಾಡೋಣ."

"ನಿಮಗೆ ಇನ್ನೂ ವಿಶ್ವಾಸವಾಗಿಲ್ಲವೇ? ಚರರನ್ನು ಕಳುಹಿಸಿ ಸುದ್ದೀ ತರಿಸಬೇಕಾದರೆ, ಒಂದು ವಾರವಾದರೂ ಬೇಕು. ಸುಮ್ಮನೆ ಕಾಲಾವಧಿ ಮಾಡುವ ಕಾರಣವೇನು? ನಿಮಗೆ ಸಂಶಯವಾಗುತ್ತಿದ್ದರೆ ಚರರನ್ನು ಕಳುಹಿಸಿ ನಂಬಿಗೆ ಮಾಡಿಕೊಳ್ಳಬಹುದು; ಆದರೆ ಯುದ್ಧದ ಸಿದ್ಧತೆಯು ಇಂದಿನಿಂದಲೆ ನಡೆಯಲಿ. ಹೂಂ! ಬೇಗನೆ ಏಳಿರಿ! ಸರದಾರ-ಸೇನಾಪತಿಗಳಿಗೆ ಆಜ್ಞಾಪತ್ರ ಕಳುಹಿಸಿರಿ!"

ಅಹಮ್ಮದಶಹನ ಉದ್ಭ್ರಾಂತ ಹೃದಯವನ್ನು ನೋಡಿ ನಿಜಾಮು ಉದ್ದಾಲನು ಸೋಜಿಗಗೊಂಡನು.

---

## ಪ್ರಣಯ ಪತ್ರಿಕೆ.

ಕನಕಲತೆಯು ವಿಚಾರಸಾಗರದಲ್ಲಿ ಮುಳುಗಿದ್ದಳು. ಅವಳು ತನ್ನ ತಂದೆಯ ಪರಮಮಿತ್ರನಾದ ಭೀಮಸಿಂಹನಲ್ಲಿಗೆ ಬಂದು ಎರಡು ವಾರಗಳು ಗತಿಸಿದವು. ನನ್ನ ವಂಶವನ್ನು ನಿರ್ಮೂಲ ಮಾಡಿದ ಪಾತಕಿಯಾದ ಶಹನ ಸೇಡನ್ನು ಯಾವಾಗ ತೀರಿಸಿಕೊಂಡೇನೆಂದು ಅವಳು ಆತುರಳಾಗಿದ್ದಳು. ಅಹಮ್ಮದಶಹನ ಸೇಡನ್ನು ತೀರಿಸಿಕೊಳ್ಳುವ ಕಾರಸ್ಥಾನದಲ್ಲಿ ಮಂಜುಳೆಯನ್ನು ಅವಳು ಸಹಾಯಕ್ಕೆ ತೆಗೆದುಕೊಂಡಿದ್ದಳು. ಮಂಜುಳೆಯು ಕಾರಸ್ಥಾನದ ಪ್ರಾರಂಭಕ್ಕೆಂದು ಹೋದವಳು ಇದುವರೆಗೆ ಬಾರದ್ದರಿಂದ, ಅವಳು ವಿಚಾರಕ್ಕೊಳಗಾಗಿದ್ದಳು. ಅನಂತರದಲ್ಲಿ ಅವಳು ತನ್ನ ಉಡಿಯಲ್ಲಿ ಬಚ್ಚಿಟ್ಟ ಕೈಗತ್ತಿಯನ್ನು ಹೊರಗೆ ತೆಗೆದು:—"ಪ್ರಿಯಭಗಿನಿ, ನನ್ನ ಕಾರಸ್ಥಾನವು ವ್ಯರ್ಥವಾದರೆ ನೀನು ನನ್ನ ಶೀಲರಕ್ಷಣೆಗಾಗಿ ಹೆಣಗುವೆಯಷ್ಟೆ? ನಿನ್ನನ್ನು ನಂಬಿಯೆ ನಾನು ಈ ವಿಲಕ್ಷಣ ಕಾರಸ್ಥಾನವನ್ನು ಪ್ರಾರಂಭಿಸಿರುವೆನು." ಎಂದು ನುಡಿದು ಅದನ್ನು ಚುಂಬಿಸಿ, ಒರೆಯಲ್ಲಿ ಹಾಕಿ ಮತ್ತೆ ಉಡಿಯಲ್ಲಿಟ್ಟುಕೊಂಡಳು. ಬಳಿಕ ಅವಳಿಗೆ ತನ್ನ ಪ್ರಿಯ ಜನರ ಮರಣದ ಬಗ್ಗೆ ಕಡುದುಃಖವಾಯಿತು.

ಅಷ್ಟರಲ್ಲಿ ಭೀಮಸಿಂಹನು ಅಲ್ಲಿಗೆ ಬಂದು, ದುಃಖಿಕಷ್ಟಿಯಾದ ಕನಕಲತೆಯನ್ನು ನೋಡಿ ವ್ಯಾಕುಲಗೊಂಡು—"ಕುಮಾರಿ, ಸತ್ತವರಿಗಾಗಿ ಅತ್ತು ಪ ಯೋ

ಜನವಿಲ್ಲ. ನಿನ್ನನ್ನು ನಾನು ಮಮತೆಯಿಂದ ರಕ್ಷಿಸುವೆನು. ಸರ್ವೋತ್ಕೃಷ್ಟವಾದ ವರನನ್ನು ಹುಡುಕಿ ವಿವಾಹ ಮಾಡಿ, ನಿನ್ನ ಜೀವನವನ್ನು ಸುಖಮಯಮಾಡುವೆನು. ನೀನು ತಿಲಾಂಶವಾದರೂ ಚಿಂತಿಸಬೇಡ. ಹುಟ್ಟಿದವರು ಸಾಯಲೇಬೇಕು. ನಿನ್ನ ತಂದೆಯೂ ಅಣ್ಣನೂ ಧರ್ಮಕ್ಕಾಗಿ ಕಾದಿ, ವೀರ ಗತಿ ಹೊಂದಿರುವರು. ನಿಯತಿಯ ನಿಯಮವು ಹೇಗೆ ಇರುವದೋ ಹಾಗೆ ಆಗುವದು. ಕನಕಲತೆ, ನಿನ್ನ ಸಲುವಾಗಿ ಇನ್ನೊಮ್ಮೆ ಮನುಷ್ಯಯಜ್ಞವು ಆಗುವಂತಿದೆ!''

''ಪಿತಾಜಿ!'' ಕನಕಲತೆಯು ವಿಸ್ಮಯದಿಂದ:—''ನನ್ನ ಸಲುವಾಗಿ ಮತ್ತೆ ಮನುಷ್ಯಯಜ್ಞವೇ? ಮತ್ತೆ ಅನರ್ಥವೆ?''

''ಹೌದು ಕುಮಾರಿ! ನೀನು ಜೀವಂತವಾಗಿರುವದನ್ನೂ, ನನ್ನಲ್ಲಿದ್ದದ್ದನ್ನೂ ಬಾದಶಹನಿಗೆ ಯಾವ ನೀಚರೋ ತಿಳಿಸಿರುವರು. ಅವನು ನನ್ನ ಮೇಲೆ ದಂಡೆತ್ತಿ ಬರುವ ಸಿದ್ಧತೆ ನಡೆಸಿರುವನಂತೆ!''

''ಇಷ್ಟೇಯೊ? ಸಾಕು; ಇನ್ನು ಈ ಭಯಾನಕವೂ ಹೃದಯವಿಕಾರವೂ ಆದ ಮನುಷ್ಯಯಜ್ಞವು ಸಾಕು. ನನ್ನ ಸಲುವಾಗಿ ನನ್ನ ತಂದೆಯ ರಾಜ್ಯವು ಉಧ್ವಸ್ತವಾದದ್ದಲ್ಲದೆ, ಹೋಡೀರಾಜ್ಯದೊಳಗಿನ ಸ್ವಾಮಿನಿಷ್ಠ ರಜಪುತರು ಸಹಸ್ರಾವಧಿ ಜನರು ನಾಶಹೊಂದಿರುವರು; ಸಾವಿರಾರು ಸ್ತ್ರೀಯರು ಭಸ್ಮೀಭೂತರಾದರು. ಮುಂದೊದಗಬಹುದಾದ ಹೊಸ ಮನುಷ್ಯಯಜ್ಞವನ್ನು ನಿಲ್ಲಿಸಿಬಿಡಬೇಕೆಂದು ನನ್ನ ನಿಶ್ಚಯವಿದೆ''

''ಅಸಂಭವ, ಅಸಂಭವ!'' ''ಅದೇಕೆ ಅಸಂಭವವು, ಪಿತಾಜೀ?''

''ಅಹಮ್ಮದಶಹನು ದೃಢನಿಶ್ಚಯಿಯು. ಅವನು ನನ್ನ ರಾಜಧಾನಿಯನ್ನು ಮುತ್ತದೆ ಬಿಡುವದಿಲ್ಲ. ಅಂದಮೇಲೆ, ಮನುಷ್ಯಯಜ್ಞವು ನಿಲ್ಲುವ ಬಗೆ ಹೇಗೆ?''

''ಹಾಗಾದರೆ ನನ್ನನ್ನು ಅಹಮ್ಮದಶಹನಿಗೆ ಒಪ್ಪಿಸಿ ಬಿಡಿರಿ.''

''ಏನು! ನಾನು ಇದೇನು ಕೇಳುತ್ತಿರುವೆನು!'' ಭೀಮಸಿಂಹನು ಆಶ್ಚರ್ಯಚಕಿತನಾಗಿ ನುಡಿದು:—''ಕನಕಲತೆ, ನೀನು ವಿನೋದಕ್ಕಾಗಿ ಹೀಗೆ ಆಡುವಿಯೊ? ಅಥವಾ ಬಂಧು-ಬಾಂಧವರ ಹಾಗು ಸ್ವಜನರ ಮೃತಿಯಿಂದ ಉದ್ಭ್ರಾಂತಳಾಗಿ ಹೀಗೆ ಆಡುವಿಯೊ?''

''ವಿನೋದಕ್ಕಾಗಿಯೂ ಅಲ್ಲ; ಉದ್ಭ್ರಾಂತಳಾಗಿಯೂ ಅಲ್ಲ. ಜಾಗ್ರತೆಯಿಂದಲೂ ವಿವೇಕ ಬುದ್ಧಿಯಿಂದಲೂ ಆಡುತ್ತಿರುವೆನು.''

''ಕನಕಲತೆ, ನೀನು ನಿಜವಾದ ಕನಕಲತೆಯಹುದೆ? ಪರ್ವತಸಿಂಹನ-ಹೋಡೀರಾಜ್ಯದ ಉಜ್ವಲ ಧರ್ಮಾಭಿಮಾನಿಯಾದ ನೃಪವರನ-ಪುತ್ರಿಯಾದ ತೇಜಸ್ವೀ ಸತೀಶಿರೋಮಣಿಯಾದ ಕನಕಲತೆಯಲ್ಲ; ಮಾಯಾ ಕನಕಳಿರುವೆ!''

''ಪಿತಾಜಿ, ನೀವು ಬೇಕಾದ ಹಾಗೆ ನನ್ನನ್ನು ತಿರಸ್ಕರಿಸಿರಿ. ನನ್ನೊಬ್ಬಳ ಸಲುವಾಗಿ ಈಗೊಮ್ಮೆ ನೆತ್ತರದ ಕಾಲುವೆಯು ಹರಿದಿರುವದು. ಒಂದು ರಾಜ್ಯವು ನಾಶವಾಗಿರುವದು. ಒಂದು ರಾಜವಂಶವು ವಿಧ್ವಂಸವಾಗಿರುವದು. ಮತ್ತೊಮ್ಮೆ ಅಂತಹ ಘಟನೆಗಳೊದಗಬೇಕೆಂದು ನನ್ನ ಇಚ್ಛೆಯಿಲ್ಲ. ಅಹಮ್ಮದಶಹನು ಬಲಾಢ್ಯ

ನಿರುವನು. ಅವನು ನಿಮ್ಮ ರಾಜ್ಯವನ್ನೂ ರಾಜವಂಶವನ್ನೂ ಹಾಳುಮಾಡುವನು. ತಂದೆಯವರೆ, ಬೇಡ; ಮತ್ತೆ ಅಂಥ ಅನರ್ಥವನ್ನು ತಂದುಕೊಳ್ಳುವದು ಬೇಡ. ನನ್ನ ಜೀವನಕ್ಕೆ ಅಷ್ಟೊಂದು ಮಹತ್ವ ಕೊಡಬೇಡಿರಿ. ಸದ್ಯದಲ್ಲಿ ಎಷ್ಟೋ ರಾಜಪುತ್ರಾನಿಯರು ಯವನರ ಜನಾನಖಾನೆಯಲ್ಲಿರುವರು. ಹತ್ತರೊಡನೆ ಹನ್ನೊಂದು; ನಾನೇನು ಹೊಸದು ಮಾಡಬೇಕಾಗಿಲ್ಲ. ನೀವು ಆತ್ಮನಾಶ ಮಾಡಿಕೊಳ್ಳುವ ಹವ್ಯಾಸಕ್ಕೆ ಹೋಗದೆ, ನನ್ನನ್ನು ಅಹಮ್ಮದಶಹನಿಗೆ ಒಪ್ಪಿಸಿಬಿಡಿರಿ."

"ಕನಕಲತೆ, ನೀನೇ ಏನು, ಪರ್ವತಸಿಂಹನ ಆದರ್ಶಕುಮಾರಿ ಕನಕಲತೆಯು? ಬಂಧು-ಬಾಂಧವರನ್ನೂ, ರಾಜ್ಯವನ್ನೂ, ವಂಶವನ್ನೂ ಉಧ್ವಸ್ತಗೊಳಿಸಿದ ದುಷ್ಟ ಅಹಮ್ಮದಶಹನನ್ನು ಪರ್ವತಸಿಂಹನ ನಿಜವಾದ ಕುಮಾರಿಯು ಎಂದೂ ವಿವಾಹವಾಗಲಿಕ್ಕೆ ಸಿದ್ಧಳಾಗುತ್ತಿದ್ದಿಲ್ಲ. ರಜಪುತ ರಮಣಿಯರಲ್ಲಿ ಆದರ್ಶವೆನಿಸಿಕೊಂಡ ಕನಕಲತೆಯಲ್ಲಿ ಇಂತಹ ಕೀಳು ವಿಚಾರವು ಉದಯವಾಗುತ್ತಿದ್ದಿಲ್ಲ. ಒಂದು ವೇಳೆ ನೀನೇ ನಿಜವಾದ ಕನಕಲತೆಯಾಗಿದ್ದರೆ, ಭೀಷಣವಾದ ಘಟನೆಯಿಂದ ನೀನು ಭ್ರಮಿಷ್ಟಳಾಗಿರುವೆಯೆಂದೇ ನಾನು ಭಾವಿಸಿರುವೆನು; ಅಥವಾ ನಾನು ಸ್ವಪ್ನದಲ್ಲಿರುವೆನೋ ಏನು?"

"ಸ್ವಪ್ನವಲ್ಲ; ನಿಜಸ್ಥಿತಿಯೇ ಹೀಗಿರುವದು. ನಾನು ಅಹಮ್ಮದಶಹನ ಬಳಿಗೆ ಹೋಗುವದನ್ನು ನಿಶ್ಚಯಿಸಿ ಬಿಟ್ಟಿರುವೆನು."

"ಕುಲಾಂಗಾರಳೆ! ಪಿಶಾಚಿ! ನೀನು ಇದೇನು ಕಾರ್ಯವನ್ನು ಹೂಡಿದೆ? ನಾನು ನಿನ್ನನ್ನು ಎಂದಿಗೂ ಇಲ್ಲಿಂದ ಹೋಗಗೊಡುವದಿಲ್ಲ."

"ನಾನು ಅವಶ್ಯವಾಗಿ ಇಲ್ಲಿಂದ ಹೋಗುವೆನು. ನಿಮ್ಮ ಪ್ರತಿಬಂಧವನ್ನು ಲೆಕ್ಕಿಸುವದಿಲ್ಲ."

"ನಿನ್ನನ್ನು ಈಗಲೆ ಸೆರೆಯಲ್ಲಿರಿಸುವೆನು!"

"ಹಾಗಾದರೆ ಆತ್ಮಘಾತ ಮಾಡಿಕೊಳ್ಳುವೆನು." ಎಂದು ಕನಕಲತೆಯು ನುಡಿದು, ಉಡಿಯಲ್ಲಿರಿಸಿದ ಕತ್ತಿಯನ್ನು ಹೊರಗೆ ತೆಗೆದಳು.

"ಕನಕಲತೆ, ಈ ಆಸೂರೀ ಕೃತ್ಯ ಮಾಡಬೇಡ. ನಿನ್ನ ಇಚ್ಛೆಯಂತೆ ವರ್ತಿಸು. ಆತ್ಮನಾಶ ಮಾಡಿಕೊಳ್ಳಬೇಡ. ಮೊದಲು ಕತ್ತಿಯನ್ನು ಒರೆಗಾಣಿಸು." ಎಂದು ಭೀಮಸಿಂಹನು ನುಡಿದು, ಆ ಘಟನೆಯಿಂದ ಅಸಹ್ಯವಾದ ದುಃಖಗೊಂಡು, ಅವನು ಮೂರ್ಛಿತನಾಗಿ ಭೂಮಿಗೆ ಬಿದ್ದನು. ಕೂಡಲೆ ಅರಮನೆಯಲ್ಲಿ ಭೀಷಣವಾದ ಕೋಲಾಹಲವೆದ್ದಿತು. ಸೇವಕರು ಭೀಮಸಿಂಹನನ್ನು ತೆಗೆದುಕೊಂಡು ಹೋಗಿ ಶಯನಾಗಾರದಲ್ಲಿ ಮಲಗಿಸಿ ಉಪಚರಿಸಹತ್ತಿದರು. ಅವನು ಎಚ್ಚತ್ತ ಮೇಲೆ ಕನಕಲತೆಯು ಭೀಮಸಿಂಹನ ಕಿವಿಯಲ್ಲಿ ಏನನ್ನೋ ಹೇಳಿದಳು. ಆಗ ಅವನ ಮನಸ್ಸು ಎಷ್ಟರ ಮಟ್ಟಿಗೆ ಸಮಾಧಾನ ಹೊಂದಿತೆಂಬದನ್ನು ತಿಳಿಯಲಿಕ್ಕೆ ಮಾರ್ಗವಿದ್ದಿಲ್ಲ.

ಭೀಮಸಿಂಹನನ್ನು ಸಾಂತ್ವನ ಪಡಿಸಿದ ಮೇಲೆ ಕನಕಲತೆಯು ಒಂದು ಪತ್ರ ಬರೆದಳು. ಆ ಪತ್ರದೊಳಗಿನ ಸಂಗತಿಯು ಕೆಳಗೆ ಕಾಣಿಸಿದಂತಿತ್ತು:—

"ಪ್ರಿಯ ಅಹಮ್ಮದಶಹರೇ, ಧರ್ಮದ ದುರಭಿಮಾನದಿಂದ ನನ್ನ ತಂದೆಯವರು ಅನುಚಿತಕಾರ್ಯ ಮಾಡಿದರು. ಅದಕ್ಕೆ ನನ್ನ ಉಪಾಯವಿಲ್ಲ. ಅತ್ಯಂತ ವೈಭವಸಂಪನ್ನರಾದ ನಿಮ್ಮನ್ನು ವರಿಸುವ ಭಾಗ್ಯವು ಸಾಮಾನ್ಯರಿಗೆ ಘಟಿಸಲಾರದು. ನನ್ನ ಪ್ರಾರಬ್ಧ ಯೋಗವು ಒಳಿತಾಗಿದ್ದುದರಿಂದಲೇ ಇಂತಹ ಅಮೃತೋಪಮ ಸಂಧಿಯು ಒದಗಿದೆ. ನಾನು ಆನಂದದಿಂದ ತಮ್ಮನ್ನು ವರಿಸಲೊಪ್ಪಿರುವೆನು. ಯಾವಾಗ ನಿಮ್ಮ ಸಹವಾಸದ ಯೋಗವು ಘಟಿಸುವದೋ, ಎಂದು ಮನಸ್ಸು ಆತುರಗೊಂಡಿದೆ. ಈ ಪ್ರಣಯಪತ್ರಿಕೆಗೆ ದಯವಿಟ್ಟು ಬೇಗನೆ ಉತ್ತರ ಕಳುಹಬೇಕೆಂದು ಈ ದೀನದಾಸಿಯ ಪ್ರಾರ್ಥನೆಯು. ತಮ್ಮ ದರ್ಶನಾಕಾಂಕ್ಷಿಣಿ,

—ಕನಕಲತೆ."

ಪತ್ರಬರೆಯುವದಾದ ಮೇಲೆ ಕನಕಲತೆಯು ಅದನ್ನು ದೂತನ ಕಡೆಗೆ ಕೊಟ್ಟು, ಅಹಮ್ಮದಶಹನಿಗೆ ತಲುಪಿಸುವದಕ್ಕೆ ಆಜ್ಞೆ ಮಾಡಿದಳು. ಅಷ್ಟರಲ್ಲಿ ಮಂಜುಳೆಯು ಅಲ್ಲಿಗೆ ಬಂದು, ತಾನು ಗುಪ್ತಚರನ ಕಾರ್ಯವನ್ನು ನಿರ್ವಿಘ್ನವಾಗಿ ನೆರವೇರಿಸಿದ ಸಂಗತಿಯನ್ನು ತನ್ನ ಗೆಳತಿಗೆ ತಿಳಿಸಿದಳು; ಹಾಗು ಬಾದಶಹನಿಂದ ಪಾರಿತೋಷಕವಾಗಿ ದೊರೆತ ರತ್ನಹಾರವನ್ನು ತೋರಿಸಿದಳು. ಆಗ ಕನಕಲತೆಯು ಬಾದಶಹನ ದಂಡಯಾತ್ರೆಯ ಸಂಗತಿಯನ್ನು ತಿಳಿಸಿ, ಭೀಮಸಿಂಹನೊಡನೆ ಆದ ವಾದ-ವಿವಾದದ ಎಲ್ಲ ವೃತ್ತಾಂತವನ್ನು ಹೇಳಿದಳು. ತಾನು ಮಾಡಿದ ಗುಪ್ತಚರ ಕಾರ್ಯಕ್ಕೆ ಬೇಗನೆ ಯಶವು ದೊರೆತದ್ದರಿಂದ ಮಂಜುಳೆಗೆ ಆನಂದವಾಯಿತು. ಕನಕಲತೆಯು ತಾನು ಬರೆದ ಪ್ರಣಯ ಪತ್ರಿಕೆಯೊಳಗಿನ ಅಭಿಪ್ರಾಯ ತಿಳಿಸಿದಳು.

---

## ವಿಲಕ್ಷಣ ಪ್ರಾಯಶ್ಚಿತ್ತ!

ಇಂದು ಖುಶನುಮಾ ಝೀಲ ಮಹಾಲಿನಲ್ಲಿ ಒಳ್ಳೆಯ ಸಡಗರದ ಸಮಾರಂಭವು ನಡೆದಿತ್ತು. ಎಲ್ಲಿ ನೋಡಿದಲ್ಲಿ ಗಾಯನ, ವಾದನ, ನರ್ತನಗಳು ನಡೆದಿದ್ದವು. ರಾಜಧಾನಿಯು ತಳಿರ್ದೋರಣಗಳಿಂದಲೂ ಧ್ವಜಪತಾಕೆಗಳಿಂದಲೂ ಸಿಂಗರಿಸಲ್ಪಟ್ಟಿತ್ತು. ನೂರಾರು ಆನೆಗಳೂ ನೂರಾರು ಕುದುರೆಗಳೂ ಸುವರ್ಣರೌಪ್ಯಾಭರಣಗಳಿಂದ ಸೊಬಗುಗೊಂಡಿದ್ದವು. ಕಿನಕಾಫಿನ ವಸ್ತ್ರಾಚ್ಛಾದಿತವಾದ ಬಂಗಾರದ ಕಳಸದ ಪಲ್ಲಕ್ಕಿಯು ಮಧ್ಯಭಾಗದಲ್ಲಿತ್ತು. ಈ ವೈಭವದ ಮೆರವಣಿಗೆಯು ಏತಕ್ಕಾಗಿ ಇರಬಹುದು?

ಸಿಂಧದ ಬಾದಶಹನಾದ ಅಹಮ್ಮದಶಹನು ತನ್ನ ಮನೋಹರೆಯಾದ ಕನಕಲತೆಯನ್ನು ಇಷ್ಟು ವೈಭವದಿಂದ ರಾಜಧಾನಿಗೆ ಕರೆತಂದಿದ್ದನು. ಮೆರವಣಿಗೆಯು ಖುಶನುಮಾ ಝೀಲಿಗೆ ಬಂತು. ಅಹಮ್ಮದಶಹನ ಆನಂದಕ್ಕೆ ಪಾರಾವಾರವೇ ಇಲ್ಲದಾಯಿತು. ಸ್ವರ್ಗದಿಂದ ಅಪ್ಸರೆಯೇ ಬಂದು ತನ್ನ ಮನೆಯನ್ನು ಶೃಂಗರಿಸಿದಳೆಂದು ಅವನು ಭಾವಿಸಿದನು. ಮಾರನೆಯ ದಿನ ಲಗ್ನಮುಹೂರ್ತವಿತ್ತು. ಲಗ್ನಘಟಿಕೆಯ ವರೆಗಿನ ಪ್ರತಿಯೊಂದು ಕ್ಷಣವು ಅವನಿಗೆ ಒಂದೊಂದು ಯುಗದಂತೆ ಭಾಸವಾಗಹತ್ತಿತ್ತು. ಅತ್ಯಾತುರರ ಸ್ಥಿತಿಯು ಹೀಗೆಯೆ ಸರಿ!

ಹಿಂದು ರಮಣಿಯಾದ ಕನಕಲತೆಯನ್ನು ಸಂತೋಷಪಡಿಸುವದಕ್ಕಾಗಿ ಅಹಮ್ಮದಶಹನು ಹಿಂದು ಪದ್ಧತಿಯ ವಿವಾಹವನ್ನು ಜರುಗಿಸಬೇಕೆಂದು ನಿಶ್ಚಯಿಸಿದನು. ದೇವರಿಗೆ ಅಭಿಷೇಕವು ಪ್ರಾರಂಭವಾಯಿತು. ಬ್ರಾಹ್ಮಣರಿಗೆ ಭೂರಿದಕ್ಷಿಣೆ ಕೊಡುವ ಕಾರ್ಯವು ಒತ್ತರದಿಂದ ನಡೆಯಿತು. ಎಲ್ಲ ಜಾತಿಯವರಿಗೂ ಭೋಜನ ಸಮಾರಂಭವು ಪ್ರಾರಂಭವಾಯಿತು. ಮರುದಿವಸವೇ ಲಗ್ನವಿದ್ದುದರಿಂದ ಎಲ್ಲಿ ನೋಡಿದಲ್ಲಿ ರಾಜಧಾನಿಯ ತುಂಬ ಒಂದಿಲ್ಲೊಂದು ಉತ್ಸವದ ಕಾರ್ಯಗಳು ನಡೆದಿದ್ದವು. ರೌಪ್ಯಸಾಗರದ ದಂಡೆಯಲ್ಲಿದ್ದ ಖುಶನುಮಾ ಝೀಲ ರಾಜಮಂದಿರದಲ್ಲಿ ನಡೆದ ಸಡಗರದ ಸಮಾರಂಭಗಳನ್ನಂತು ವರ್ಣಿಸಲಾಸಲ್ಲ.

ಖುಶನುಮಾ ಝೀಲ ಮಂದಿರದ ಉಪ್ಪರಿಗೆಯ ಮೇಲೆ ಕನಕಲತೆಯೂ ಮಂಜುಳೆಯೂ ಕುಳಿತಿದ್ದರು. ಅವರು ಈ ಸಮಾರಂಭವನ್ನು ನೋಡಿ ನಗತೊಡಗಿದ್ದರು. ಆಗ ಅವರು ತಮ್ಮ-ತಮ್ಮೊಳಗೆ ಏನೇನೋ ಕುಚುಕುಚು ಮಾತಾಡಹತ್ತಿದ್ದರು. ಅಷ್ಟರಲ್ಲಿ ಒಬ್ಬ ಸೇವಕನು ಅಲ್ಲಿಗೆ ಬಂದು—"ಮಹಾರಾಣೀ ಸಾಹೇಬರೆ, ಬಾದಶಹರು ನಿಮ್ಮ ಸಲುವಾಗಿ ಅಮೌಲ್ಯವಾದ ರತ್ನಾಭರಣಗಳನ್ನೂ ವಸ್ತ್ರಗಳನ್ನೂ ಕಳುಹಿಸಿರುವರು; ಸ್ವೀಕರಿಸಬೇಕು."

'ಒಳ್ಳೇದು.' ಎಂದು ನುಡಿದು ಕನಕಲತೆಯು ಅವುಗಳನ್ನು ತೆಗೆದುಕೊಂಡು, ತನ್ನಲ್ಲಿದ್ದ ಒಂದು ಗಂಟನ್ನು ಸೇವಕನ ಕಡೆಗೆ ಕೊಟ್ಟು—"ಈ ಗಂಟಿನಲ್ಲಿ ವಸ್ತ್ರಗಳೂ ರತ್ನಾಭರಣಗಳೂ ಇರುವವು. ನೂತನ ವಧುವು ಇವುಗಳನ್ನು ಕೊಟ್ಟಿರುವಳೆಂದು ಬಾದಶಹರಿಗೆ ಹೇಳು. ಲಗ್ನದ ವೇಳೆಯಲ್ಲಿ ವಧುವು ಪ್ರೇಮದಿಂದ ಕೊಟ್ಟ ವಸ್ತ್ರಾಲಂಕಾರಗಳನ್ನೇ ಧರಿಸುವ ರೂಢಿಯು ನಮ್ಮ ಜನರಲ್ಲುಂಟು. ನಾಳೆ ಮುಂಜಾನೆ ವಿವಾಹದ ಪೂರ್ವದಲ್ಲಿ ನನ್ನ ಭೆಟ್ಟಿಗೆ ಬರುವಾಗ ಇವುಗಳನ್ನು ಧರಿಸಿಕೊಂಡೇ ಬರಬೇಕೆಂದು ಬಾದಶಹರಿಗೆ ತಿಳಿಸುವದಕ್ಕೆ ಮರೆಯಬೇಡ."

ಮಾರನೆಯ ದಿವಸ ಸೂರ್ಯೋದಯವಾಗುತ್ತಲೆ ಅಹಮ್ಮದಶಹನು ತನ್ನ ಪ್ರಿಯತಮೆಯು ಕೊಟ್ಟು ಕಳುಹಿಸಿದ ಉಡಿಗೆ-ತೊಡಿಗೆಗಳನ್ನೂ ಆಭರಣಗಳನ್ನೂ ಧರಿಸಿದನು. ವಿವಾಹದ ಪೂರ್ವದಲ್ಲಿ ಪ್ರೇಮಪುತ್ಥಳಿಯನ್ನೊಮ್ಮೆ ಕಾಣಬೇಕೆಂದು ಅವನು ಸೌಧಾಗ್ರಕ್ಕೆ ಹೊರಟಿದ್ದನು. ಅಷ್ಟರಲ್ಲಿ ಒಬ್ಬ ದೂತನು ಅಲ್ಲಿಗೆ ಬಂದು—"ಮಹಾರಾಣೀ ಸಾಹೇಬರು ನೀವು ಕಳಿಸಿದ ವಸ್ತ್ರಾಭರಣಗಳನ್ನು ಧರಿಸುವದರಲ್ಲಿ ತೊಡಗಿರುವರಂತೆ. ಆಮಂತ್ರಣ ಕಳಿಸುವ ವರೆಗೆ ಬರಕೂಡದೆಂದು ನಿಮಗೆ ತಿಳಿಸಲಿಕ್ಕೆ ಹೇಳಿದರು."

ಶಹನು ದರ್ಶನೋತ್ಕಂಠಿತನಾಗಿದ್ದನು. ಆದರೂ ಪ್ರಿಯಕರೆಯ ಆಜ್ಞೆಯನ್ನು ದೇವತಾಜ್ಞೆಯೆಂದು ಮನ್ನಿಸಿ, ಯಾವಾಗ ಆಮಂತ್ರಣ ಬರುವದೋ ಎಂದು ಮಾರ್ಗಪ್ರತೀಕ್ಷೆ ಮಾಡತೊಡಗಿದನು. ಮುಂದೆ ಒಂದೆರಡು ಗಳಿಗೆಗಳ ಮೇಲೆ ಮಂಜುಳೆಯು ಅಲ್ಲಿಗೆ ಬಂದು—"ಜಹಾಂಪನಾಹ!"

"ಪ್ರಿಯ ರಮಣಿ, ಇಲ್ಲಿಗೆ ನೀನೇ ಏಕೆ ಬಂದೆ? ದಾಸ-ದಾಸಿಯರನ್ನು ಕಳುಹಿದ್ದರೆ ಆಗುತ್ತಿದ್ದಿಲ್ಲವೆ?"

"ಖಾವಿಂದ, ನಾನು ನಿಮ್ಮ ಪ್ರಿಯಕರಳಲ್ಲ; ಅವಳ ದಾಸಿಯು!"

ತನ್ನ ವಿವೇಕಹೀನತೆಗಾಗಿ ಶಹನು ನಾಚಿದನು. ದಾಸಿಯೇ ಇಷ್ಟು ಲಾವಣ್ಯವತಿಯಿರುವಾಗ ಒಡತಿಯು ಹೇಗಿರಬಹುದೆಂದು ಅವನು ಲೆಕ್ಕ ಹಾಕಹತ್ತಿದನು. ಅವನು ತಾನು ಮಾಡಿದ ತಪ್ಪು ಮುಚ್ಚಿಕೊಳ್ಳುವದಕ್ಕಾಗಿ--"ನಾನು ದಿಟ್ಟಿಸಿ ನೋಡಲಿಲ್ಲ. ಅದರಲ್ಲಿ ಕನ್ನಡಕ ಹಾಕದಿದ್ದರೆ ಚನ್ನಾಗಿ ದೃಷ್ಟಿ ಹರಿಯುವದಿಲ್ಲ. ದಿನಹೋದ ಮೇಲೆ—"

ಬಾದಶಹನು ನಾಲಿಗೆ ಕಚ್ಚಿಕೊಂಡು, ಒಂದು ತಪ್ಪು ಮುಚ್ಚಹೋಗಿ ಮ-ತ್ತೊಂದು ತಪ್ಪು ಮಾಡಿದೆನೆಂದು ಅಂದುಕೊಂಡನು. ಆಗ ಚತುರೆಯಾದ ಮಂಜುಳೆಯು ಉಪಹಾಸದಿಂದ—"ನಿಮಗೆ ದಿನಹೋದವರೆಂದು ಹೆಸರಿಡುವವರು ಕಡುಮೂರ್ಖರು. ದಿನಹೋದವರು ವಿವಾಹ ಮಾಡಿಕೊಳ್ಳುವರೇಕೆ? ವಿವಾಹಕ್ಕಾಗಿ ಇಷ್ಟು ಪ್ರಚಂಡ ಸಾಹಸ ಮಾಡುವರೇಕೆ? ನೀವು ಚಿಕ್ಕವರು. ಯಾಕೋ ಚಿಕ್ಕಂದಿನಲ್ಲಿಯೆ ಗಡ್ಡ-ಮೀಸೆಗಳು ಹೀಗೆ ಬೆಳ್ಳಗಾಗಿವೆಯಷ್ಟೆ! ಐವತ್ತೆಂದರೆ ಅದೇನು ಐದುನೂರಲ್ಲ; ಸಾವಿರಲ್ಲ! ನೀವು ಇನ್ನೊಮ್ಮೆ ದಿನಹೋದವರೆಂದು ಅಂದುಕೊಳ್ಳಬೇಡಿರಿ."

"ಜನರು ಕುಚು ಕುಚು ಮಾತಾಡಿದ್ದನ್ನು ಕೇಳಿ ಕೇಳಿ ನನ್ನ ಬಾಯಲ್ಲಿ ಅದೇ ಮಾತು ಬಂತು. ಜನರ ಮಾತಿಗೆ ಮಹತ್ವ ಕೊಡದಿದ್ದರೆ ನಾನು ಈ ಕೆಲಸ ಮಾಡುತ್ತಿದ್ದಿಲ್ಲ." ಎಂದು ಶಹನು ಪೌರುಷದಿಂದ ನುಡಿದನು.

"ನಡೆಯಿರಿ ಬಾದಶಹರೆ, ನಿಮ್ಮ ಬೇಗಮಳು ಕರೆದುಕೊಂಡು ಬರುವದಕ್ಕಾಗಿ ತಿಳಿಸಿರುವಳು."

"ನಡೆ, ಹೋಗುವಾ. ಅವಳು ನನ್ನ ದಾರೀ ನೋಡುತ್ತಿರಬಹುದು. ದರ್ಶನೋತ್ಕಂಠಿತಳಾಗಿ ಕುಳಿತ ಅವಳಿಗೆ ತೊಂದರೆ ಕೊಡುವದು ಉಚಿತವಲ್ಲ."

ಬಾದಶಹನು ಮಂಜುಳೆಯೊಡನೆ ಕನಕಲತೆಯ ಕೋಣೆಗೆ ಹೋದನು. ಅವನು ಒಳಗೆ ಪ್ರವೇಶಿಸಿದ ಕೂಡಲೆ ಮಂಜುಳೆಯು ಉಪ್ಪರಿಗೆಯ ದ್ವಾರವನ್ನು ಮುಚ್ಚಿ ಭದ್ರಪಡಿಸಿದಳು.

ಬಾದಶಹನು ನಿರ್ಜರಾಂಗನೆಯರನ್ನು ತಲೆಬಾಗಿಸುವ ದಿವ್ಯ ಲಾವಣ್ಯಮಯಿಯಾದ ಕನಕಲತೆಯನ್ನು ನೋಡಿ ದಂಗು ಬಡೆದು ನಿಂತನು. ಕನಕಲತೆಯು ಬಾದಶಹನನ್ನು ನೋಡಿ:-"ಜಹಾಂಪನಾಹ, ಕುಳಿತುಕೊಳ್ಳಿರಿ. ಕೃತಾಪರಾಧದ ಬಗ್ಗೆ ನನಗೆ ಪಶ್ಚಾತ್ತಾಪವಾಗಿದೆ. ದಯಮಾಡಿ ಈ ಮಂಚದ ಮೇಲೆ ಕುಳಿತುಕೊಳ್ಳಿರಿ."

ಶಹನು ಎಚ್ಚತ್ತು ಮಂಚದ ಮೇಲೆ ಕುಳಿತು—"ಛೀ! ನೀನೇನು ಅಪರಾಧ ಮಾಡಿರುವೆ? ನೀನು ತಪ್ಪುಗಾರಳಲ್ಲ. ತಪ್ಪುಗಾರರು ಪರಲೋಕದಲ್ಲಿರುವರು."

"ಅವರ ಸುದ್ದೀ ತೆಗೆಯಬೇಡಿರಿ. ನೀವು ಬೇಗನೆ ಅಲ್ಲಿಗೆ ಹೋದರೂ ಅವರ ಭೆಟ್ಟಿಯಾಗುವದಿಲ್ಲ; ಯಾಕಂದರೆ, ಅವರು ಇರುವ ಸ್ಥಳವು ಬೇರೆ; ನೀವು ಹೊಂದುವ ಗತಿಯು ಬೇರೆ."

ಬಾದಶಹನಿಗೆ ಕನಕಲತೆಯ ಮಾತಿನ ಅರ್ಥವು ಹೊಳೆಯಲಿಲ್ಲ; ಯಾಕಂದರೆ, ಅವನು ರೂಪಾಂಧನಾಗಿ ಸ್ಮೃತಿನಷ್ಟತೆ ಹೊಂದಿದ್ದನು. ಆಗ ಕನಕಲತೆಯು ಮಂದ

ಹಾಸವನ್ನಭಿನಯಿಸುತ್ತ-“ಖಾವಿಂದ, ನಾನು ನಿಮ್ಮ ವೈಭವವನ್ನು ನೋಡಿ ಬೆರಗಾದೆನು. ನಿಮ್ಮಂತಹ ವೈಭವಶಾಲಿಗಳು ಮಾತಿಗೆ ಬಾರದ ಈ ಅಭಾಗಿನಿಯನ್ನು ಬಯಸಿದ್ದು ನೋಡಿದರೆ ಮನಸ್ಸಿಗೆ ಯಾಕೋ ಸಂದೇಹವೆನಿಸುತ್ತದೆ. ನೀವು ಕೇವಲ ವಿನೋದಕ್ಕಾಗಿ ಹೀಗೆ ನಟಿಸುತ್ತಿರಬಹುದೆಂದು ನನ್ನ ಅನುಮಾನವಿದೆ.”

ಛೀ ಹುಚ್ಚೀ! ನಾನು ನಿನ್ನ ಕೂಡ ವಿನೋದ ಮಾಡುವೆನೆ? ನಾನು ವೈಭವಸಂಪನ್ನನಿದ್ದರೆ ನೀನು ರೂಪಸಂಪನ್ನಳಿರುವೆ. ಅಂತೆಯೆ ಅಲ್ಲಾನು ಜೋಡು ಕೂಡಿಸಿದನು.'' ಎಂದು ನುಡಿದು, ಶಹನು:—“ಓಹೋ! ಇದೇನು? ಹೀಗೆಯೇ ನಿಂತೆ? ನೀನು ಮಂಚದ ಮೇಲೆ ಕುಳಿತುಕೊಳ್ಳುವದಿಲ್ಲವೇನು ?”

“ವಿವಾಹದ ಪೂರ್ವದಲ್ಲಿ ಹಾಗೆ ಮಾಡಲಿಕ್ಕೆ ಬರುವಂತಿಲ್ಲ. ಇಂದೇ ವಿವಾಹವು. ವಿವಾಹೋತ್ತರದಲ್ಲಿ ಸರಸ-ಸಲ್ಲಾಪಗಳಿಗೂ ಹಾಸ್ಯ-ವಿನೋದಕ್ಕೂ ಅವಧಿಯಿಲ್ಲವೆಂದು ನೀವು ಹೇಗೆ ತಿಳಿದಿರಿ ?”

“ಹಿಂದುಗಳು ಮೂಢಮತಿಗಳು.” ‘ನಮ್ಮ ಧರ್ಮಶಾಸ್ತ್ರವೇ ಹಾಗಿದೆ!’

“ಆಗಲಿ; ನಿನ್ನ ಇಚ್ಛೆಯಂತಾಗಲಿ.''

“ಖಾವಿಂದ, ಇಂದು ನಮ್ಮಿಬ್ಬರನ್ನು ನೋಡುವದಕ್ಕಾಗಿ ನಿಮ್ಮ ರಾಜನಿಷ್ಠ ಪ್ರಜಾಜನರು ಉತ್ಸುಕರಾಗಿರುವರು. ನಡೆಯಿರಿ; ಉಪ್ಪರಿಗೆಯ ಮುಂದಿನ ಪಟಾಂಗಣದಲ್ಲಿ ಸ್ವಲ್ಪ ವೇಳೆ ನಿಲ್ಲೋಣ. ಅಲ್ಲಿ ನಿಂತರೆ, ನಾವು ಎಲ್ಲರಿಗೂ ಕಾಣುವೆವು.''

“ಅಲ್ಲಿ ಬಿಸಿಲು ಇರುವದು. ಸುಕೋಮಲ ಪುಷ್ಪಸದೃಶವಾದ ನಿನ್ನ ಶರೀರವು ಬಿಸಿಲಿನಿಂದ ಬಾಡಿ ಬಸವಳಿಯುವದು.”

“ನೀವು ನನ್ನ ಯೋಚನೆ ಮಾಡಬೇಡಿರಿ. ಏಕನಿಷ್ಠ ಪ್ರಜಾಜನರ ಮನೋಭಂಗ ಮಾಡುವದು ನಿಮ್ಮ ಧರ್ಮವಲ್ಲ.''

ಕನಕಲತೆಯ ವಾಣಿಯೆಂದರೆ ದೇವವಾಣಿಯು. ಶಹನು ಮಂಚದಿಂದೆದ್ದನು. ಇಬ್ಬರೂ ಪಟಾಂಗಣದಲ್ಲಿ ನಿಂತರು. ಜನರು ಅಟ್ಟಾಲಿಕೆಯ ಮುಂದಿನ ಬೈಲಲ್ಲಿ ನಿಂತು, ಕನಕಲತೆಯ ಸೌಂದರ್ಯವನ್ನು ನಿರೀಕ್ಷಿಸತೊಡಗಿದ್ದರು. ಸೂರ್ಯನ ಕಿರಣಗಳಿಂದ ಮೈಮೇಲಿನ ರತ್ನಾಭರಣಗಳು ಮತ್ತಿಷ್ಟು ಪ್ರಕಾಶಗೊಂಡು, ಅವಳ ಸೌಂದರ್ಯವನ್ನು ದ್ವಿಗುಣಿತ ಮಾಡಿದ್ದವು. ಇವಳೇನು ಅಪ್ಸರೆಯೋ? ಗಂಧರ್ವ ಕನ್ನಿಕೆಯೋ? ಎಂದು ಜನರು ಬೆರಗಾಗಿ ನೋಡತೊಡಗಿದ್ದರು!

ಕನಕಲತೆಯು ಪ್ರೇಮದಿಂದ ಕೊಟ್ಟ ರತ್ನದಹಾರಗಳು ಖಾನನ ಮೈಮೇಲೆ ಲಕಲಕಿಸತೊಡಗಿದ್ದವು. ಸ್ವಲ್ಪ ಹೊತ್ತಿನಲ್ಲಿ ಖಾನನ ಶರೀರಕ್ಕೆ ಉಷ್ಣತೆಯು ತಗಲಿದಂತಾಯಿತು. ಆಗ ಅವನು:—

“ಪ್ರಿಯ ಕನಕಲತೆ, ಯಾಕೋ ದಾಹವಾಗುತ್ತದೆ.”

“ಇಷ್ಟಕ್ಕಾಗಿ ಹೀಗೆ ಅನ್ನುವಿರಾ? ರಾಜ ಶರೀರ, ಬಿಸಿಲಲ್ಲಿ ನಿಂತಿರುವಿರಿ; ಅದರಲ್ಲಿಯೂ ನಾನು ಕೊಟ್ಟ ಹೊಸ ವಸ್ತ್ರ ಧರಿಸಿರುವಿರಿ. ಅದರಿಂದಲೆ ದಾಹವಾಗುತ್ತಿರಬಹುದು. ಇದರಲ್ಲಿ ವಿಶೇಷವೇನು?''

"ಇರಬಹುದು." ಎಂದು ಖಾನನು ನುಡಿದು:—"ಪ್ರಿಯ ರಮಣಿ, ಇಂದಿನಂಥ ಆನಂದವನ್ನು ನಾನು ಹಿಂದೆ ಎಂದೂ ಅನುಭವಿಸಿದ್ದಿಲ್ಲ. ಅಲ್ಲಾನು ನನ್ನ ಮೇಲೆ ಪ್ರಸನ್ನನಾಗಿರುವನು. ಸ್ವರ್ಗದಲ್ಲಿ ಇಂತಹ ಸೌಖ್ಯವು ದೊರೆಯುತ್ತಿರಲಿಕ್ಕಿಲ್ಲ."

"ನಿಮ್ಮ ಮೇಲೆ ಅಲ್ಲಾನು ಪ್ರಸನ್ನನಾಗಿರುವದರಿಂದಲೆ ನಿಮಗೆ ಸ್ವರ್ಗಸುಖ ವನ್ನು ಕೊಡಬೇಕೆನ್ನುತ್ತಿರುವನು."

"ಕೊಟ್ಟೇ ಬಿಟ್ಟಿರುವನು."

"ಸುಖದ ಹಿಂದೆ ದುಃಖವೊದಗುವದು ಸೃಷ್ಟಿಯ ನಿಯಮಕ್ಕನುಸಾರವಾಗಿದೆ. ನೀವು ಈಗ ಆನಂದದಲ್ಲಿರುವಿರಿ. ನಿಮ್ಮನ್ನು ಆನಂದಗಿರಿಯ ಉಚ್ಚ ಶಿಖರದಿಂದ ದುಃಖಸಾಗರದಲ್ಲಿ ಕೆಡಹಲಿಕ್ಕೆ ದೇವರಿಗೆ ಬಹಳ ಹೊತ್ತು ಹಿಡಿಯುವದಿಲ್ಲ. ದೇವರು ಮುನಿದರೆ, ನಾವು ಇದೇ ಕ್ಷಣದಲ್ಲಿ ಸತ್ತು ಹೋದೇವು. ಈಶ್ವರೇಚ್ಛೆಯ ವಿರುದ್ಧವಾಗಿ ಯಾರು ಹೋಗುವರು?"

ಕನಕಲತೆಯ ಭಯಂಕರವಾದ ವಿಚಾರಗಳು ಉದ್ಭ್ರಾಂತನಾದ ಬಾದಶಹ ನಿಗೆ ರುಚಿಕರವಾಗಿಯೇ ಪರಿಣಮಿಸಿದವು. ಅವನು ಪ್ರಿಯಕರೆಯ ಪ್ರತಿಯೊಂದು ವಾಕ್ಯಕ್ಕೂ ಪ್ರತಿಯೊಂದು ಶಬ್ದಕ್ಕೂ 'ಅಚ್ಛಾ, ಅಚ್ಛಾ, ಕ್ಯಾ ಬಾತಹೈ!' ಎಂದು ಅನ್ನುತ್ತಿದ್ದನು. ಅವಳ ಮಾತಿನೊಳಗಿನ ಮರ್ಮವನ್ನು ತಿಳಿಯುವಷ್ಟು ಜಾಗ್ರತೆಯು ಆಗ ಶಹನಲ್ಲಿದ್ದಿಲ್ಲ. ಆಗ ಕನಕಲತೆಯು:—ನಿಮ್ಮ ದೇಹದ ಮೇಲಿನ ರತ್ನಾಭರಣ ಗಳ ಪ್ರಕಾಶವು ಹೇಗೆ ಬಿದ್ದಿರುವದು ನೋಡಿರಿ."

"ಹೌದು-ಹೌದು" ಎಂದು ಖಾನನು ಗೋಣು ಅಲ್ಲಾಡಿಸಿದನು.

"ನಾನು ಪ್ರೇಮದಿಂದ ಕಳುಹಿಸಿದ ಈ ಆಭರಣಗಳೊಳಗಿನ ರತ್ನಗಳು ಬೆಂಕಿ ಯಂತೆ ಕಾಣುತ್ತಿರುವವು ನೋಡಿರಿ."

"ಹೌದು-ಹೌದು."

"ನಾನು ಕಳುಹಿಸಿದ ವಸ್ತ್ರಗಳ ಮೇಲೆ ಈ ರತ್ನಗಳು ಬೆಂಕಿಯ ಕಿಡಿಗಳನ್ನಿ ಟ್ಟಂತೆ ಶೋಭಿಸುತ್ತಿರುವವು ನೋಡಿರಿ."

"ಹೌದು-ಹೌದು."

"ಅಹಹಾ! ಎಂತಹ ಭೂಷಣಗಳನ್ನು ಧರಿಸಿರುವಿರಿ! ನಾನು ಕಳುಹಿಸಿದ ಈ ವಸ್ತ್ರಾಭರಣಗಳಿಂದ ನಿಮ್ಮ ಶರೀರಕ್ಕೆ ಎಷ್ಟು ಕಾಂತಿಯು ಬಂದಿದೆ ನೋಡಿರಿ."

'ಹೌದು-ಹೌದು.'

"ಕಾಂತಿಯುಕ್ತ ರತ್ನಹಾರಗಳನ್ನು ಧರಿಸಿದವರಾದ ನಿಮ್ಮನ್ನು ಜನರು ನೋಡಿ ದರೆ 'ಬಾದಶಹರಿಗೇನು ಬೆಂಕಿಹತ್ತಿರುವದೋ ಏನೋ?' ಎಂಬಂತೆ ತೋರುವದು ನೋಡಿರಿ!" 'ಹೌದು-ಹೌದು-ಹೌದು!'

ಪರಕ್ಷಣದಲ್ಲಿ ಬಾದಶಹನ ಅರಿವೆಗಳಿಗೆ ಬೆಂಕಿ ಹತ್ತಿತು. ಕೂಡಲೆ ಕನಕ ಲತೆಯು-"ಇಲ್ಲಿ ಬಿಸಿಲಿದೆ, ಒಳಗೆ ನಡೆಯಿರಿ." ಎಂದು ನುಡಿದು, ಅವನ ಕೈ ಹಿಡಿದು ಒಳಗೆ ಎಳೆದೊಯ್ದಳು. ಒಳಗೆ ಹೋದೊಡನೆಯೆ ಅವನ ಮೈ ಮೇಲೆ ಭಯಂಕರ ವಾದ ಜ್ವಾಲೆಯು ಎದ್ದಿತು! ಅವನು ಗಾಬರಿಯಾಗಿ ಚೀರುತ್ತ ಅತ್ತ ಇತ್ತ ಓಡಾಡ

ತೊಡಗಿದನು. ಗಾಳಿಯಿಂದ ಉರಿಯು ಮತ್ತಿಷ್ಟು ಪ್ರಜ್ವಲಿಸಿತು. ಅವನು ನೆಲದ ಮೇಲೆ ಬಿದ್ದು—'ಕನಕಲತೆ! ಕಾಪಾಡು! ಕಾಪಾಡು!!' ಎಂದು ಕೂಗತೊಡಗಿದನು.

"ಮದಾಂಧ, ಪಾಪಿ ಯವನಾ! ನಾನು ನಿನ್ನನ್ನು ಕಾಪಾಡುವದಕ್ಕಾಗಿಯೆ ಇಲ್ಲಿಗೆ ಬಂದಿರುವೆನು!" ಎಂದು ನುಡಿದು, ಅವನ ಮಸ್ತಕವನ್ನು ಎಡಗಾಲಿನಿಂದ ತಾಡನ ಮಾಡಿ "ಸೇಡು! ಸೇಡು!!" ಎಂದು ಕೂಗಿದಳು.

ಕನಕಲತೆಯು ಬಾದಶಹನಿಗೆ ಉಡುಗರೆಯೆಂದು ಕಳಿಸಿದ ವಸ್ತ್ರಗಳಿಗೆ ತೀವ್ರ ಜ್ವಾಲಾಗ್ರಾಹಿ ದ್ರವ್ಯವನ್ನು ಲೇಪನ ಮಾಡಿ, ರತ್ನಾಭರಣಗಳಲ್ಲಿ ಸೂರ್ಯಕಾಂತ ಹರಳಿನ ಮಣಿಗಳನ್ನು ಸೇರಿಸಿದ್ದಳು. ಅದರಿಂದ ಬಿಸಿಲಲ್ಲಿ ನಿಂತೊಡನೆಯೆ ಆ ಅರಿವೆಗಳಿಗೆ ಬೆಂಕಿಹತ್ತಿತು.

ಉಪ್ಪರಿಗೆಯ ಮೇಲೆ ನಡೆದ ಭೀಷಣವಾದ ದೃಶ್ಯವೂ ಕೋಲಾಹಲವೂ ಜನರಿಗೆ ಕಂಡಿತು. ಅವರು ಗಾಬರಿಯಾಗಿ ಮೇಲೆ ಬರಲಿಕ್ಕೆ ಹೊರಟರು. ಮಂಜುಳೆಯು ಉಪ್ಪರಿಗೆಯ ಮೇಲೆ ಪ್ರವೇಶಿಸುವ ಬಾಗಿಲವನ್ನು ಮುಚ್ಚಿ ಭದ್ರಪಡಿಸಿದ್ದಳು. ಹೊರಗಿನ ಜನರು ಬಾಗಿಲು ಮುರಿಯುವ ಸಾಹಸ ನಡೆಯಿಸಿದರು.

ಇತ್ತ ಬಾದಶಹನು ಉರಿಯಿಂದ ಹುರುಪಳಿಸತೊಡಗಿದ್ದನು. ಆಗ ಮಂಜುಳೆಯು ಅಲ್ಲಿಗೆ ಬಂದಳು. ಬಾದಶಹನು ಉರಿ ಹತ್ತಿ ಹೊರಳಾಡುತ್ತಿರುವದನ್ನು ನೋಡಿ—"ಶಹಾ! ಹೇಗಿದೆ ವಿವಾಹವು?" ಎಂದು ನುಡಿದು—"ಕನಕಲತೆ, ಇವನ ಶಿರಚ್ಛೇದ ಮಾಡಿ ಪ್ರತಿಜ್ಞೆಯನ್ನು ಪೂರೈಸಿಕೋ!"

ಬಳಿಕ ಕನಕಲತೆಯು ಶಸ್ತ್ರವನ್ನು ಹಿರಿದಳು. ಆಗ ಬಾದಶಹನು ಗಾಬರಿಯಿಂದ:—"ಕನಕಲತೇ, ರಕ್ಷಿಸು, ರಕ್ಷಿಸು!"

"ಅತ್ಯಾಚಾರಿಯಾದ ದುಷ್ಟ ಬಾದಶಹಾ, ನಿನ್ನನ್ನು ಕಾಯಬೇಕೆ? ನನ್ನ ವಂಶದ ಮೇಲೆ ಅಗ್ನಿಯನ್ನು ಚಲ್ಲಿದ ನಿನ್ನನ್ನು ಕಾಯಬೇಕೆ! ನಿನ್ನ ಕೊಲೆ ಮಾಡುವದಕ್ಕಾಗಿಯೇ ನಾನು ಬಂದಿರುವೆನು. ಪಾಪಿ! ಈಗ ನನ್ನ ಕಾರ್ಯವಾಯಿತು ಅನುಭವಿಸು, ಪಾಪದ ಪ್ರಾಯಶ್ಚಿತ್ತವನ್ನು!"

ಕನಕಲತೆಯು ತನ್ನಲ್ಲಿದ್ದ ಕೈಗತ್ತಿಯಿಂದ ಬಾದಶಹನ ಶಿರಚ್ಛೇದ ಮಾಡಿದಳು! ಅಷ್ಟರಲ್ಲಿ ಉಪ್ಪರಿಗೆಯ ಬಾಗಿಲು ಮುರಿಯುವ ಸಪ್ಪಳವು ಅವರಿಗೆ ಕೇಳಿಸಿತು. ಕೂಡಲೆ ಅವರು:—"ಜಯ ಏಕಲಿಂಗಜಿ! ಜಯ ಭಾರತಮಾತೆ!" ಎಂದು ಜಯಜಯಕಾರ ಧ್ವನಿ ಮಾಡಿ, ಕೃತಕೃತ್ಯರಾದೆವೆಂದು ಆನಂದಮಯರಾಗಿ, 'ಖುಶನುಮಾಖೀಲ' ರಾಜಮಂದಿರದ ಉಪ್ಪರಿಗೆಯ ಮೇಲಿಂದ ಮಂದಿರಕ್ಕೆ ಹೊಂದಿದ್ದ ರೌಪ್ಯಸಾಗರದ ಮಡುವಿನಲ್ಲಿ ಹಾರಿದರು!

ರೌಪ್ಯಸಾಗರವು ವೀರಕುಮಾರಿಯರಾದ ಕನಕಲತೆ-ಮಂಜುಳೆಯರನ್ನು ಬರತೆಗೆದುಕೊಂಡು, ಅಬ್ಬರದ ಧ್ವನಿಮಾಡಿ, ಸ್ವಲ್ಪ ವೇಳೆಯಲ್ಲಿ ಶಾಂತವಾಯಿತು!

---

* ಸಂಪೂರ್ಣ *